# ಮುನ್ನುಡಿ.

'ಲೇಖಕೋ ಲೇಖಕಂ ದೃಷ್ಟ್ವಾ ಶ್ವಾನಂ ಶ್ವಾ ಗುರ್ಗುರಾಯತೇ' ಎಂಬ ಗಾದೆಯ ಮಾತನ್ನು ಅರಿಯದವರು ವಿರಲ; ಈ ಸಂದರ್ಭದಲ್ಲಿ ಅದನ್ನು ಸ್ಮರಣೆಗೆ ತಂದುಕೊಳ್ಳಬಹುದಾದ ಕೆಲವು ತೀಕ್ಷ್ಣಬುದ್ಧಿಯ ವಾಚಕರಿಗಾಗಿ ನಾನೇ ನಾಲ್ಕು ಶಬ್ದಗಳನ್ನು ಮೊದಲು ಬರೆಯಬೇಕೆನ್ನುವೆನು. ನಾನೂ ಹತ್ತಾರು ನಾಟಕಗಳನ್ನು ಬರೆದವನು. ಇನ್ನೊಬ್ಬರ ನಾಟಕಗಳ ವಿಮರ್ಶೆಯ ಅಧಿಕಾರ ನನಗಿರುವುದೋ? ಆದರೆ ಮುನ್ನುಡಿಯಲ್ಲಿ ಗ್ರಂಥದ ವಿಮರ್ಶೆ ಯಾವ ರೀತಿಯಿಂದಲೂ ಮಾಡತಕ್ಕದ್ದಲ್ಲ ಎಂದು ನಾನಿಟ್ಟುಕೊಂಡಿದ್ದೇನೆ. ಶ್ರೀ. ಪಾಟೀಲರು ಉತ್ಸಾಹಿಗಳು; ಪರಿಸ್ಥಿತಿಗಾಗಿ ಸ್ವತಃ ವಿಚಾರಮಾಡಬೇಕೆಂಬ ಹಟ ಮತ್ತು ಶಕ್ತಿಯುಳ್ಳವರು ಎಂಬುದನ್ನು ಮಾತ್ರ ನಿರ್ವಿವಾದವಾಗಿ ಹೇಳಬಹುದು. ಅವರ ನಾಟಕಗಳು ಕೆಲವರಿಗೆ ಸಂಭಾಷಣೆ ಮಾತ್ರ ಎನಿಸಬಹುದು. ಕೆಲವರಿಗೆ ನಾಟಕ ವಿಷಯದಲ್ಲಿ ಲಾಘವ ಕಂಡು ಬರಬಹುದು. ಅಷ್ಟಕ್ಕೆ ಮಾತ್ರ ನಾಟಕಕಾರನ ಯೋಗ್ಯತೆಗೆ ಕುಂದು ಬಾರದು. ಹೆಸರಾದ ನಾಟಕಕಾರರ ನಾಟಕಗಳಲ್ಲೂ ಮೊದಲಿನ ಮತ್ತು ತರುವಾಯದ ಕೃತಿಗಳಲ್ಲಿ ಹೆಚ್ಚು-ಕೊರತೆ ಕಂಡುಬರುವುದು. ಲೇಖನ ಅನುಭವದಿಂದ ನಿರೂಪಣೆ ಮತ್ತು ಶೈಲಿಗಳು ಸಜ್ಜುಗೊಳ್ಳುವುವು. ಅನುಭವದಿಂದ ಬಾರದ ವಿಷಯವೆಂದರೆ

ನಾಟ್ಯಮನೋವೃತ್ತಿ; ಒಂದು ವಿಷಯವನ್ನು ಅನೇಕ ದೃಷ್ಟಿಗಳಿಂದ ಏಕ ಕಾಲಕ್ಕೆ ಕಾಣುವ ಶಕ್ತಿ; ಬೇರೆ ಬೇರೆ ಸಂನಿವೇಶಗಳ ಸಾಮ್ಯ–ವೈಷಮ್ಯಗಳನ್ನು ಕಂಡು ಅವುಗಳೊಳಗಿನ ಏಕರೂಪತೆಯನ್ನು ಅರಿಯುವ ಶಕ್ತಿ; ಜೀವನದ ವಿಧವಿಧ ಚಿತ್ರಗಳನ್ನು ಒಂದಾಗುವಂತೆ ಹೊಂದುವಂತೆ ನಿಯಮಿತ ಕಾಲ-ದೇಶ-ಪರಿಸ್ಥಿತಿಗಳಲ್ಲಿ ಕಾಣಿಸುವ ಶಕ್ತಿ; ರಂಗಭೂಮಿಯ ಮರ್ಯಾದೆ-ವೈಶಿಷ್ಟ್ಯಗಳನ್ನರಿತು, ನಾಟ್ಯಕಲೆಗೆ ಮಾತುಗಾರಿಕೆ–ನಟನೆಗಳು ಮುಖ್ಯ ವಾಹಕ ( Medium ) ಗಳೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು ಯೋಗ್ಯ ಪರಿಣಾಮವನ್ನು ಪ್ರೇಕ್ಷಕರ ಮನಸಿನ ಮೇಲೆ ಬಿಂಬಿಸುವ ಶಕ್ತಿ; ಬೇರೆ-ಬೇರೆ ಸ್ಥಿತಿಗಳಲ್ಲಿದ್ದ ಜನರ ಆಚಾರ–ವಿಚಾರ–ವೇಷ–ಭಾಷೆಗಳನ್ನು ನೋಡುವ, ನೋಡಿ ತನ್ನಲ್ಲಿಟ್ಟುಕೊಳ್ಳುವ ಶಕ್ತಿ. ಸೂಕ್ಷ್ಮರೂಪವಾಗಿ ಇಂತಹ ಶಕ್ತಿ ಶ್ರೀ. ಪಾಟೀಲರಲ್ಲಿ ಇದೆ ಎಂಬುದು ಈ ನಾಟಕಗಳನ್ನು ರಂಗಭೂಮಿಯ ಮೇಲೆ ನೋಡಿದರೆ ಹೊಳೆಯಬಹುದು; ಏನಿಲ್ಲೆಂದರೂ ನನಗೆ ಹಾಗೆ ತೋರಿದ್ದರಿಂದ, ಅವರ ಪರಿಚಯವಿಲ್ಲದಿದ್ದರೂ, ನಾನು ಈ ಮುನ್ನುಡಿಯನ್ನು ಬರೆಯಲು ಒಪ್ಪಿಕೊಂಡಿದ್ದೇನೆ.

ಇದಲ್ಲದೆ ಇನ್ನೂ ಒಂದು ಮಾತು. ಈ ನಾಟಕಗಳಲ್ಲಿದ್ದ ವಿಚಾರ ಸರಣಿಯು ಎಲ್ಲರಿಗೂ ಅಭಿಮತವೆನಿಸಲಿಕ್ಕಿಲ್ಲ. ಆದರೂ ಇಂದಿನ ನಮ್ಮ ಸಮಾಜಜೀವನದ ಬೆಳೆವಣಿಗಾಗಿ ಅಂತಹ ವಿಚಾರಸರಣಿಯು ಕೆಲವರಲ್ಲಿ, ವಿಶೇಷವಾಗಿ ತರುಣರಲ್ಲಿ ಇದ್ದರೆ ನಮ್ಮ ಜೀವನಕ್ಕೆ ಪೋಷಕವಾಗುವುದೆಂದು ನನ್ನ ಅಭಿಪ್ರಾಯ. ಅದಕಾಗಿ ನಾನು ಸಂತೋಷದಿಂದ ಈ ಮುನ್ನುಡಿಗೆ ಉದ್ಯುಕ್ತನಾಗಿರುವೆ.

ನನ್ನ ಮನಸಿನಲ್ಲಿದ್ದ ಎರಡೂ ಕಾರಣಗಳು ತೀವ್ರದಲ್ಲಿಯೆ ರೂಪುಗೊಂಡು ಹೊರಬೀಳಲೆಂದೂ ಹಾಗಾಗಿಸಬಹುದಾದ ಯೋಗ್ಯತೆ ಶ್ರೀ.ಪಾಟೀಲರಲ್ಲಿ ಇದೆ ಎಂದೂ ಕೊನೆಗೆ ಹೇಳಬಯಸುತ್ತೇನೆ.

ಧಾರವಾಡ.
ತಾ. ೨೪-೯-೩೮.

ಶ್ರೀರಂಗ.

# ಬಿನ್ನಹ.

ಒಂದು ಸಮಯದಲ್ಲಿ ನಾಟಕವೆಂದರೆ ಮೂಗು ಮುರಿಯುವ ನಾನು ಇಂದು ನಾಟಕಗಳನ್ನು ಬರೆದು, ಆಡಿ, ಆಡಿಸಿ ಸಂತಯಿಸುವ ಕಾಲ ಬಂದುದಕ್ಕೆ ಆಶ್ಚರ್ಯಪಡುವೆ. ನನ್ನ ಕನ್ನಡ ಪ್ರಪಂಚದಲ್ಲಿಯ ನಾಟ್ಯ ವಿಲಾಸಿ ಸಂಘದವರು ತಮ್ಮ ಕೆಲ ಪ್ರಯೋಗಗಳನ್ನು ಎಲ್ಲೆಡೆಗೆ ಆಡಿದುದನ್ನು ನೋಡಿದುದೂ, ಅವರ ಜೊತೆಗೆ ನಾನು ಅನೇಕ ಸಲ ಚರ್ಚಿಸಿದುದೂ ಆ ನನ್ನ ವಿರುದ್ಧ ಭಾವನೆಯು ಬೈಲಾಗಲಿಕ್ಕೆ ಕಾರಣವಾಯಿತೆನ್ನಬಹುದು. ನಾಟಕದ ಸಂಬಂಧವಾಗಿ ನಾನು ಹೆಚ್ಚು ಓದಿದವನಲ್ಲ; ನೋಡಿದವನಲ್ಲ; ಕೇಳಿದವನೂ ಅಲ್ಲ. ಆದರೂ ಒಂದು ಬಗೆಯ ವಿಶಿಷ್ಟ ಅನುಭವದಿಂದ ಕೈಹಾಕಿರುವೆ. ನಾನು ನಾಟಕವನ್ನು ಸ್ವಾನುಭವದಿಂದ ನೋಡಹತ್ತಿದಂದಿನಿಂದ "ನಾಟಕ, ಆದಕ್ಕೆ ಸಂಬಂಧಿಸಿದ ಇನ್ನಿತರ ರೂಪಗಳು ಸೃಷ್ಟಿಯ ಯಾವ ಮೂಲೆಯಲ್ಲಿ ನಡೆಯುದಿಲ್ಲ ? ಪುರುಷನು ನಾಯಕನಾಗಿ, ಪ್ರಕೃತಿಯು ನಾಯಿಕೆಯಾಗಿ, ಮಾಯಾರೂಪದ ಖಲನಾಯಕನೊಡನೆ, ವಿಶ್ವರಂಗದ ಮೇಲೆ, ಆಗಸದ ನೀಲಿಯ ಮಂಟಪದ ಕೆಳಗೆ,

ವಿರಾಟಸ್ವರೂಪದ ಸಂಘವನ್ನು ಕಟ್ಟಿಕೊಂಡು, ಯುಗಯುಗವೆಂಬ ಅಂಕುಗಳುಳ್ಳ, ಸಂವತ್ಸರವೆಂಬ ದೃಶ್ಯಗಳುಳ್ಳ, ಹುಟ್ಟು-ಸಾವಿನ ಪರದೆಗಳನ್ನು ಸರಿಸಿ, ಹಗಲು-ಇರುಳಿನ ಬೆಳಕು-ಕತ್ತಲೆಯಲ್ಲಿ, ಜೀವ-ಜಡಗಳನ್ನು ಸಂಗಾತಿಗಳನ್ನಾಗಿ ಮಾಡಿಕೊಂಡು, ಅನಂತಜೀವನವೆಂಬ ನಾಟಕವನ್ನು ಈ ರೀತಿ ಅಖಂಡವಾಗಿ ಆಡುವವರು ಯಾರು?" ಇತ್ಯಾದಿ ಪ್ರಶ್ನೆಗಳು ನನ್ನ ತಲೆಯಲ್ಲಿ ತೂಗಾಡಹತ್ತಿದವು. ಈ ಅನುಭವದಿಂದ ಗಳಿಸಿದ್ದೇ ನನ್ನ ನಾಟ್ಯಶಕ್ತಿ. ಈ ನಾಟಕಗಳು ಆ ಅನುಭವದ ಮೂರು ಮಾತೃಕೆಗಳು.

ಶ್ರೀ. ಶ್ರೀರಂಗರ ಪರಿಚಯವು ಇರದಿದ್ದರೂ (ಅವರ ನಾಟಕಾವಲೋಕನದಿಂದ ಸಾಕಷ್ಟು ಇದೆ.) Birds of the same feather flock together ಎಂಬ ನ್ಯಾಯದಿಂದ ಅವರನ್ನು ನಾನು ಮುನ್ನುಡಿಗಾಗಿ ಕೇಳಿಕೊಂಡೆ. ಅವರೊಂದು ಅವಸರದ ಕೆಲಸದಲ್ಲಿದ್ದರೂ ನನಗೆ ನಾನು ನಿಶ್ಚಯಿಸಿಕೊಂಡಿದ್ದ ಅವಧಿಯಲ್ಲಿ ತಮ್ಮ ಮಹತ್ ಪೂರ್ಣವಾದ **ಮುನ್ನುಡಿಯನ್ನು** ಬರೆದು ಒದಗಿಸಿಕೊಟ್ಟದ್ದಕ್ಕಾಗಿ ನಾನು ಅವರಿಗೆ ಚಿರಋಣಿ.

ವೀರಭಾರತ ಪ್ರೆಸ್ಸಿನ ಒಡೆಯರಾದ ಶ್ರೀ. ಚೌಗುಲೆಯವರು ಸಕಾಲದಲ್ಲಿ ಮುದ್ರಿಸಿಕೊಟ್ಟದ್ದಕ್ಕೆ ಉಪಕೃತನು.

ಇಲ್ಲಿಯ ಕಿರಿನರಿಗಳು ನಮ್ಮೂರ ನಡತೆಯನ್ನು ಅನೇಕ ಸಲ ಅಭಿನಯಿಸಿದ್ದುಂಟು. ಈಗ ಪುನಃ ಈ ವರ್ಷದ ಮಾನೋಮಿ ಉತ್ಸವದ ಕಾಲದಲ್ಲಿ-ಪುಸ್ತಕ ಪ್ರಸಿದ್ಧಿಯ ಸಮಯದಲ್ಲಿ-ಆ ಪ್ರಯೋಗವನ್ನೂ ಅದರ ಜೊತೆಗೆ ಪ್ರಾತರ್ವಿಧಿ, ಗಾಯತ್ರೀ ಮಂತ್ರ ನಾಟಕಗಳನ್ನು ಅಭಿನಯಿಸಿದುದಕ್ಕಾಗಿ ನಾನು ಅವರೆಲ್ಲರನ್ನು ಅಭಿನಂದಿಸುವೆ.

ಪ್ರಾತರ್ವಿಧಿಯನ್ನು ಇಲ್ಲಿಯ ಕಥಾಕುಂಜ ಮಾಸಿಕದಲ್ಲಿ ಈ ಮೊದಲು ಅಚ್ಚು ಹಾಕಿದ್ದಕ್ಕಾಗಿ ಮಾನ್ಯ ಸಂಪಾದಕರನ್ನು ಸ್ಮರಿಸದಿರಲಾರೆ.

ಬೆಳಗಾವಿ.
೨೭-೯-೧೯೩೮.

**ಶ್ರೀಕೃಷ್ಣ ಪಾಟೀಲ.**

## ಪರಿವಿಡಿ.



---

ವಿ. ಸೂ. ೪ಂನೆಯ ಪುಟದ ಆರಂಭಕ್ಕೆ

ಸುಃ— (ಗಟ್ಟಿಸಿ) ವರೇಣ್ಯಂ.. ......

ಕೂಃ— ವ....ರೇ....ಣ್ಯಂ.........

ಸೇರಿಸಿ ಓದಬೇಕು.

# ಅಭಿನಯಿಸಿದವರು.

## ೧ ನಮ್ಮೂರ ನಡತೆ.

| ಪಾತ್ರಗಳು. | ಆ ಸಲ ಅಭಿನಯಿಸಿದವರು. | ಈ ಸಲ ಅಭಿನಯಿಸಿದವರು. |
|---|---|---|
| ೧ ಬೆಳಗಾವಿ | ನ. ನಾ. ಪಾಟೀಲ | ವಸಂತ ಪಾಟೀಲ |
| ೨ ಧಾರವಾಡ | ರಾಮಚಂದ್ರ ಹುಕ್ಕೇರಿ | ಕೆ. ಕೆ. ವಿಜಾಪೂರ |
| ೩ ವಿಜಾಪೂರ | ಕೃಷ್ಣ ದೇವಳೆ | ನರಸಿಂಹ ಇಂಗಳೆ |
| ೪ ಕಾರವಾರ | ಶ್ರೀನಿವಾಸ ಕುಲಕರ್ಣಿ | ಎಮ್. ವ್ಹಿ. ಮಾಸೂರ |
| ೫ ಮೈಸೂರ | ಆರ್. ಹೆಚ್. ಕುಲಕರ್ಣಿ | ಗುರು ಹಬ್ಬು |
| ೬ ವಾಙ್ಮಯ ಪ್ರಸಾರಕ | ವಸಂತ ಪಾಟೀಲ | ವೆಂಕಟೇಶ ಕುಲಕರ್ಣಿ |
| ೭ ವಕೀಲ | ಗೋವಿಂದ ಹುಕ್ಕೇರಿ | ಕೃಷ್ಣ ಮಾಸೂರ |
| ೮ ವ್ಯಾಯಾಮ ಪ್ರಸಾರಕ | ನಾರಾಯಣ ಹುಕ್ಕೇರಿ | ನಾರಾಯಣ ಭುಕ್ಕೇಬಾಗ |
| ೯ ಡಾಕ್ಟರ | ಮಧ್ವ ಮಹಿಷಿ | ಕೃಷ್ಣ ವಿಜಾಪೂರ |
| ೧೦ ವಿದ್ಯಾರ್ಥಿ | ಅನಂತ ಕುಲಕರ್ಣಿ | ಶ್ರೀಕೃಷ್ಣ ಪಾಟೀಲ |
| ೧೧ ರಾಯರು | ಕೃಷ್ಣ ಕಲಮದಾನಿ | ಮಧ್ವ ಮುಳಗುಂದ |
| ೧೨ ಕನ್ನಡ ದೇವಿ | ಕು. ಕಮಲಾ ಕುಲಕರ್ಣಿ | ಕು. ಅಂಬುತಾಯಿ ಕಡಕೋಳ |

## ೨ ಪ್ರಾತರ್ವಿಧಿ.

| | |
|---|---|
| ೧ ರಾಮರಾಯರು | ವ. ಭೀ. ಪಾಟೀಲ |
| ೨ ಸೀತಾಬಾಯಿ | ಕು. ಶಿಲಾದೇವಿ ವಾಳ್ವೇಕರ |
| ೩ ಭೀಮ | ಕು. ಗುಂಡುರಾಜ |

## ೩ ಗಾಯತ್ರೀ ಮಂತ್ರ.

| | |
|---|---|
| ೧ ಸುರೇಶ್ವರಾಚಾರ್ಯರು | ಶ್ರೀಕೃಷ್ಣ ಪಾಟೀಲ |
| ೨ ವಾಸಂತೀಬಾಯಿ | ಕು. ಶಿಲಾದೇವಿ ವಾಳ್ವೇಕರ |
| ೩ ಕೂರ್ಮ | ಕು. ಪಾಂಡುರಂಗ ಕಡಕೋಳ |
| ೪ ಚಿನ್ನ | ಕು. ಗುಂಡುರಾಜ |

# ನಮ್ಮೂರ ನಡತೆ.

೧

( ಬೆಳಗಾಂವಿಯೊಳಗಿನ ಒಂದು ಬೀದಿ, ಅಂದಚಂದದ ಮನೆಗಳು ಸಾಲಿಟ್ಟಿವೆ. ಕೆಲವು ಮನೆಗಳಿಗೆ ವಕೀಲರ ಪಾಟಿಗಳು, ಕೆಲವು ಮನೆಗಳಿಗೆ ಡಾಕ್ಟರರ ಪಾಟಿಗಳು ನೇತುಬಿದ್ದಿವೆ. ಅವು ಕೂಡ ಶುದ್ಧ ಕನ್ನಡದಲ್ಲಿ ಬರೆದವುಗಳಲ್ಲ. ಉಳಿದ ಮನೆಗಳ ಮುಂದೆ ಹೂಗಿಡಗಳ ಕಟ್ಟೆಗಳು ಕಾಣಬರುತ್ತವೆ. ಬೆಳಗಾವಿಯು ಮೆಲ್ಲಗೆ ಬರುವನು. ಮೈಮೇಲಿನ ಅರಿವೆಗಳು ಹರಿದಿವೆ. ಮುಖದ ಮೇಲೆ ಕಳೆಯಿಲ್ಲ ಪ್ಪೈಮೂಳೆಗಳು ಕಾಣಬರುತ್ತವೆ. ಹೆಜ್ಜೆಗೊಮ್ಮೆ ಉಸಿರುಗರೆಯುವನು. ಗತಗೋಷ್ಠಿಗಳನ್ನು ಬಾಯಿಂದ ಮೆಲ್ಲಗೆ ನುಡಿಯುತ್ತಾ ಕೈಯಿಂದ ಬೆರಳು ಎಣಿಸುವನು. ಕೆಲ ಹೊತ್ತು ಆಚೆ, ಈಚೆ ತಿರುಗಾಡಿ ಸಾಲು ಮನೆಗಳನ್ನು ನೋಡಿ ಉದ್ದವಾದ ಉಸಿರು ಬಿಡುವನು. ಐದಾರು ನಿಮಿಷ ಸುಮ್ಮನಿದ್ದು....)

**ಬೆಳಗಾಂವಿಃ—** ( ಇಳಿಮೋರೆಯನ್ನು ಮೇಲಕ್ಕೆ ಎತ್ತಿ ಮುಗಿಲ ನೋಡಿ, ತಿರುಗಿ ತನ್ನನ್ನು ನೋಡಿಕೊಳ್ಳುವನು.) ಹಾಯ್, ಹಾಯ್, ನನ್ನ ಅವಸ್ಥೆಯು ಹೀಗಾಗಬೇಕೆ? ದೇವೀ, ನನ್ನನ್ನು ಇಂತಹ ವಿಪನ್ನಾವಸ್ಥೆಗೆ ಗುರಿಮಾಡಬೇಕೆ ?....... ನಾನು ಮಾಡಿದ ಅಪರಾಧವೇನು ?.... ನನ್ನ ಅಪರಾಧವಾವುದು ?... [ಬಿಕ್ಕುವನು] ..... ಹಿಂದೆ ಇದೇ ನಾಡಿನಲ್ಲಿ ಅನೇಕ ಮಹಾಪುರುಷರು ಹುಟ್ಟಿ ನಿನ್ನ ಕೀರ್ತಿಧ್ವಜವನ್ನು ಜಗದ ಮೇರೆಮೇರೆಗಳಲ್ಲಿ ಮೆರೆಯಿಸಲಿಲ್ಲವೇ ? ಕವಿಕುಲಕ್ಕೆ ಶಿರೋಮಣಿಯಾದ ಆ ಮುದ್ದುರನ್ನನ ಹಾಡು ಇನ್ನೂ ಮೂಲಿಮೂಲಿಯಲ್ಲಿ ಮಲಗಿಕೊಂಡ ಜೀವಿಗಳಿಗೆ ಹೊಸ ಹುರುಪನ್ನು ಕೊಡುವದಿಲ್ಲವೇ ? ...... ಪತಿಭಕ್ತಿ ಪರಾಯಣಳೂ ವೀರಶಿರೋಮಣಿಯೂ ಆದ ಕಿತ್ತೂರ ಚೆನ್ನಮ್ಮ, ಬೆಳವಡಿ ಮಲ್ಲಮ್ಮರ ಖಡ್ಗಗಳ ಝಳಪೆಲ್ಲಿ ನೊಂದಿರುವದು ? ದೇವೀ, ನಿನಗಾಗಿ ಅರ್ಪಿಸಿದ ರುಂಡಗಳ ರಕ್ತಧಾರೆಯೆಲ್ಲಿ ಬತ್ತಿದೆ! ನಿನಗಾಗಿಯೇ ನಮ್ಮ ಮೈ ನಾಡಿನಾಡಿಗಳನ್ನು ಹರಿದು ಗುಡಿಯನ್ನು ಕಟ್ಟಲಿಲ್ಲವೇ ? ಅಂದಿನ ವೀರಪುಂಗವರ ಮಕ್ಕಳಾದ ನಾವು ನಿರ್ವೀರ್ಯರೆಂದು ತಿಳಿದಿರುವೆಯೆ?... ದೇವೀ, ನಮಗಿತ್ತ ಈ ದರಿದ್ರಕಾಲವನ್ನು ದೂರಮಾಡುವದಿಲ್ಲವೇ?.... ಭಗವತೀ, ಅನಂತಳೇ ಮೈಮೇಲಿನ ಈ ಹರಕು ಹೊದಿಕೆಗಳು ಎಂದಿಗೆ ದೂರಾಗಬೇಕು ? ಸರಿಕದ ಅಣ್ಣಂದಿರಂತೆ ನಾನೆಂದು ಬೈಲಲ್ಲಿ ಬರುವೆನು, ನಿನ್ನ ಕೀರ್ತಿಯನ್ನು ಕೊಂಡಾಡುವೆನು ! (ಉಸಿರುನುಂಗಿ) ಚಿಂತೆಯು, ದಾರಿದ್ರ್ಯವು, ನಿರುತ್ಸಾಹವು, ಆಲಸ್ಯವು ನನ್ನ ನಾಡಾದ ಬೆಳಗಾವಿಯನ್ನು ಬಿಡುವದಿಲ್ಲವೇ ! ಈ ಜನಗಳಿಗೆ ಅದೆಂತು ಹೊಸ ಜೀವಕೊಡುವಿ ?.... (ತಡೆದು) ನಾನು ಯಾವ ಅಪರಾಧವನ್ನು ಮಾಡಿರಬೇಕು ? ನನ್ನಿಂದ ಘಟಿಸಿದ ಅಪರಾಧವಾವುದು ?....... ಭಕ್ತವತ್ಸಲೆಯೇ, ಈ ನಿನ್ನ ಬಾಲಕನು ಮಾಡಿದ ಅಪರಾಧಕ್ಕೆ ಕ್ಷಮೆಯಿಲ್ಲವೇ ? ಕ್ಷಮಿಸು. ಕ್ಷಮಿಸು. ಕನ್ನಡ ದೇವಿಯೇ ಕ್ಷಮಿಸು. (ಕೈಮುಗಿಯುವನು. ಒಂದು ಕಡೆಗೆ ಮಾತಾಡಿದ ಸಪ್ಪಳವಾಗುವುದು. ಕಣ್ಣು ಬಿಟ್ಟು ಆ ಕಡೆಗೆ ನೋಡಿ) ಅಲ್ಲಿ ಯಾರೋ ಬರಹತ್ತಿರುವರು. ಯಾರು ? (ಮುಂದಕ್ಕೆ ಹೋಗಿ) ಯಾರು ? (ಮತ್ತಷ್ಟು ಮುಂದಕ್ಕೆ ಹೋಗಿ) ಧಾರವಾಡನು! ಅವನು! ಮೈಸೂರನು. ಅವನು! ಕಾರವಾರನು. ಅವನು! ವಿಜಾಪುರನು. (ದುಃಖಿಸುತ್ತ) ನನ್ನ ಅಣ್ಣಂದಿರು.

ನನ್ನ ಅಣ್ಣಂದಿರು. ಈ ಅಷ್ಟದರಿದ್ರನ ಮನೆಗೆ ಏಕೆ ಬಂದಿರಬೇಕು? ದೇವೀ, ಮೊದಲೇ ಬಡತನದಲ್ಲಿ ಬೆಂದು ಬೆಂಡಾಗಹತ್ತಿರುವೆನು. ಈ ನನ್ನ ಬಡತನವನ್ನು ಜಗತ್ತಿನ ಕಣ್ಣ ಮುಂದೆ ಕಟ್ಟಬೇಕೆಂದು ಕರೆಯಿಸಿದಿಯೇ? ಬಂದರು. ಬಂದರು. ಶೀರಾಸಮೀಪಕ್ಕೆ ಬಂದರು. ಭವಾನೀ, ನನ್ನನ್ನು ಯಾಕೆ ಬದುಕಿಸಿದ್ದಿಯಾದೀತು? ನಾನೊಬ್ಬನು ಹುಟ್ಟದಿದ್ದರೆ, ನೀನು ಬಂಜೆಯಾಗುತ್ತಿದ್ದಿಯಾ !.... ಬಂದರು... ಬಂದರು..... ಎಲ್ಲಿ ಅಡಗಬೇಕು...... ಹೇಗೆ ತಪ್ಪಿಸಲಿ?.......ಬಂ...ದ...ರು. (ಅಳುತ್ತೆ, ಕಂಣು ಮುಚ್ಚಿಕೊಂಡು ನಿಲ್ಲುವನು. ಮೇಲೆ ಹೇಳಿದಂತೆ ನಾಲ್ವರು ಬರುವರು. ತಮ್ಮ ಪ್ರಾಂತಿಯ ವೇಷಭೂಷಣಗಳನ್ನು ಧರಿಸಿದ್ದಾರೆ. ಕಾರವಾರ, ಧಾರವಾಡ, ವಿಜಾಪೂರ ಇವರು ತೊಟ್ಟುಕೊಂಡ ಅರಿವೆ ಅಂಚಡಿಗಳಲ್ಲಿ ಬಹಳ ಸಾಮ್ಯವುಂಟು. ಮೈಸೂರಿನವನಲ್ಲಿ ಸಾಕಷ್ಟು ವೈಷಮ್ಯ. ಧಾರವಾಡನು ಬಂದು ಬೆಳಗಾವಿಯ ಮೈತಟ್ಟುವನು. ಮೈಸೂರನು ಕಣ್ಣೊರಿಸುವನು. ಉಳಿದ ಇಬ್ಬರು ಆತುರತೆಯಿಂದ ನೋಡುತ್ತ ನಿಲ್ಲುವರು. ಕೆಲಹೊತ್ತಿನ ಮೇಲೆ )

**ಮೈಸೂರಃ—** (ಬೆಳಗಾವಿಯ ಕೈಬಿಡಿಸಿ, ಕಣ್ಣೊರಿಸಿ) ತಮ್ಮಾ, ತಮ್ಮಾ.....

**ಧಾರವಾಡಃ—** ಅಣ್ಣಾ, ಅಣ್ಣಾ .. ಏನಾಯಿತು ?

**ವಿಜಾಪೂರಃ—** ಅಣ್ಣಾ ಏನಾಯಿತು ? ಹೇಳು.

**ಕಾರವಾರಃ —** (ಅಳುಮೋರೆಯಿಂದ) ಏನಾಯಿತು **ಹೇಳು.** (ಬೆಳಗಾವಿಯು ಬಿಕ್ಕುವನು.)

**ಧಾರವಾಡ.—** ಅಳಬೇಡ. ಹೇಳು. ಅಣ್ಣಾ ...

**ಕಾರವಾರಃ—** ಅಣ್ಣಾ, ನೀನು ಹೀಗೆ ಅತ್ತರೆ ನಮ್ಮ ಪ್ರಾಣದ ಉಸಿರನ್ನು ಹಿಚುಕಿದಂತಾಗುವದು. ಹೇಳು.

**ಮೈಸೂರಃ—** ಮಾತಾಡು. ಮಾತಾಡು. ಹೀಗೇಕೆ ನಿಂತಿರುವಿ. ಏನಾಯಿತು ? (ಮೈಗೆ ಹಿಡಿದುಕೊಳ್ಳುವನು.) ನಿನಗೆ ಬಂದ ಸಂಕಟವಾವುದು ? ಹೇಳು........ ಅಯ್ಯೋ ಮೈಮೇಲಿನ ಅರಿವೆಗಳು ಎಷ್ಟು ಹರಿದಿವೆಯೊ !

**ಧಾರವಾಡಃ—** (ಕಣ್ಣು ಒರಿಸುವನು.) ಅಣ್ಣಾ ಏನಾಗಿದೆ. ಮೈ ನೋಯುವುದೇ ? ತಲೆ ಹೊಡೆಯುವುದೇ ? ನಮಗೆ ತಿಳಿಸದೆ ಇನ್ನಾರಿಗೆ ತಿಳಿಸುವಿ ಹೇಳು.

**ಬೆಳಗಾಂವಿಃ—** (ಕಣ್ಣೊರಿಸಿಕೊಂಡು, ಉಗುಳುನುಂಗಿ, ಎಲ್ಲರ ಮುಖನೋಡಿ) ಅಣ್ಣಾ.......(ತಡೆದು, ಬಿಕ್ಕುವನು.)

**ಮೈಸೂರುಃ—** ಏನು. ಏನು ಹೇಳು ?

**ಕಾರವಾರಃ—**
**ವಿಜಾಪೂರಃ—** } ಹೇಳು. ಪೂರ್ಣವಾಗಿ ಹೇಳು. ಬಂದ ಸಂಕಟವೇನು ? ನಿವಾರಿಸಬಹುದು.

**ಧಾರವಾಡಃ—** ಹೇಳು. ನಿನ್ನ ಸ್ಥಿತಿಯನ್ನು ನೋಡಿ ನಮಗೆ ಸಂಕಟವಾಗಹತ್ತಿದೆ. ಹೇಳು. ಬೇಗನೆ ಹೇಳು.

**ಬೆಳಗಾಂವಿಃ—** ಅಣ್ಣಾ, ಏನು ಹೇಳಬೇಕು ? ಹೇಳುವಂತಹದು ನನ್ನಲ್ಲಿ ಏನುಂಟು ? ಏನು ಉಳಿದಿದೆ ? (ಅಳುವನು .........)

**ಮೈಸೂರುಃ—**
**ಧಾರವಾಡಃ—** } ಏನಾಯಿತೆಂಬುವದನ್ನು ನಮಗಷ್ಟು ತಿಳಿಸಬಾರದೇ ? ನಿನ್ನ ಸಂಕಟದ ಹೊಣೆಗಾರಿಕೆಯು ನಮ್ಮ ಮೇಲೂ ಉಂಟು. ಏನದು ?

**ಬೆಳಗಾಂವಿಃ—**(ಮೈ ಜಾಡಿಸಿ) ಕನ್ನಡ ದೇವಿಯ ಅನುಗ್ರಹದಿಂದ ನನ್ನ ನಾಡಿನಲ್ಲಿ ಸಾವಿರಾರು ಜನರುಂಟು. ಇರುವರೆಂಬುವುದು ಮಾತ್ರ ನಿಜವು. ಉಂಡು ತಿಂದು, ತೇಗಿ ತೂಗಿ ಮಲಗುವವರೇ ಹೆಚ್ಚು. ಒಬ್ಬನು ಸಹ ಎದ್ದು ಕುಳಿತು ನನ್ನ ಕಡೆಗೆ ನೋಡುವದಿಲ್ಲ. ಏನು ಮಾಡಬೇಕು ! ಏನು ಮಾಡಬೇಕು ಇಂಥ ಮಕ್ಕಳಿಂದ !! ನನ್ನ ಪಂಚಪ್ರಾಣಗಳಾದ ವಾಙ್ಮಯದೇವಿ, ಸಮಾಜದೇವಿ, ಶಿಕ್ಷಣದೇವಿ, ಸಂಘಟನಾ, ಸುಧಾರಣಾ ಅನ್ಯಾನ್ಯಗತಿಕರಾಗಿ, ತೊಳಲಿ ಬಳಲಿ ಸಾಯುಹತ್ತಿರುವರು. ಆ ಜನರನ್ನು ಕರೆದು ಕರೆದು ಸಾಕು ಸಾಕಾಯಿತು. ಗಂಟಲು ಹರಿದು ಹೋಯಿತು. ಒಬ್ಬನಿಗೂ ಎಚ್ಚರಿಲ್ಲ. ಕಾಳರಾತ್ರಿಯ ನಿದ್ರೆಯಲ್ಲಿ ಗೊರಗುಟ್ಟಹತ್ತಿರುವರು. ಬೆಳಗನ್ನು ಕಾಣದಾಗಿರುವದು. ಈವರೆಗೂ ಅವರಿಗೆ ಬೆಳಕಿಲ್ಲ...... ಅವ

ರಿಗೆ ಬೆಳಕಿಲ್ಲ !.... ನನ್ನ ಸಾಯುವ ಮಕ್ಕಳನ್ನು ಯಾರು ಬದುಕಿಸ ಬೇಕು ! ...... ಬದುಕಿಸುವವರಾರಿಲ್ಲವೇ ? ನೀರು ಕುಡಿಸಿ ಸಂತೈಸುವವ ರಿಲ್ಲವೆ !... ದೇಶವೆಲ್ಲವು ಹಾಳಾಯಿತೇ ! ಬೆಳಗಾಂವಿಯ ಕನ್ನಡ ಜನರ ಕಿವಿಗಳು ಮಂದಗಟ್ಟಿವೆಯೆ ! ಕಿವುಡರಾಗಿರುವರೆ ! ನಿದ್ದೆಯಿಂದ ಏಳ ಬೇಕೆಂಬ ಜ್ಞಾನವಿಲ್ಲವೆ ! ಎಲ್ಲರು ಅಜಾಗ್ರತರೇ ! ಪಶುಗಳಾಗಿರುವರೇ ! ಎಚ್ಚರಿಕೆಗೆ ನಪುಂಸಕರೇ ! ಏನು ಮಾಡಲಿ. ಏನು ಮಾಡಲಿ. ಏನು ಮಾಡಲಿ. ಜಗತ್ತಿನಲ್ಲಿ ಹೇಗೆ ಬಾಳಲಿ. ಕತ್ತೆತ್ತಿಕೊಂಡು ಹೇಗೆ ತಿರುಗಾಡಲಿ. ಸರಿಕದ ನಿಮಗೆ ಮುಖವನ್ನು ಹೇಗೆ ತೋರಿಸಲಿ. ಸಾವಿನ ನೋವು ಸುತ್ತಿ ಕೊಂಡ ಈ ನನ್ನ ಸ್ಥಿತಿಯನ್ನು ನಿಮಗೆ ಹೇಗೆ ಹೇಳಲಿ........ ಎತ್ತಿ ಕುಣಿ ಸಿದ ನನ್ನನ್ನು ನೀವು ಇಂದು ಸಮಾಧಾನ ಮಾಡ ಬೇಕಾಯಿತೇ ! ಕಣ್ಣೊ ರಿಸ ಬೇಕಾಯಿತೇ!... ದೇವಿ, ಎಂಥ ಕಾಲವನ್ನು ತಂದಿಯೋ ! ನನ್ನ ನಾಡಿನ ವೀರಶ್ರೀಯು ಹೋಯಿತು. ಐಶ್ವರ್ಯವು ಹಾಳಾಯಿತು. ತಾಯ ನುಡಿಯನ್ನು ತೊರೆದರು. ನಾಡಿನೇಳ್ಗೆಯನ್ನು ಮರೆತರು. ಇನ್ನೇನು ಆಗ ಬೇಕು ? ಅನ್ಯ ದೇಶದವರು ತುಂಬಿ ಇಲ್ಲದ ಗೊಂದಲವನ್ನು ಎಬ್ಬಿಸಿ ನನ್ನ ಶಕ್ತಿಗೆ ಅಡ್ಡಿಯನ್ನು ತರಹತ್ತಿರುವರು. ತಿಳವಿನಲ್ಲಿ ಕೊಳೆಯನ್ನು ಕಲಿಸಹತ್ತಿ ರುವರು. ಇನ್ನೂ ಏನಾಗುವದೋ ಯಾರು ಬಲ್ಲರು. ಇಷ್ಟೆಲ್ಲವನ್ನು ಹೇಗೆ ಸಹಿಸಲಿ? ಹೇಗೆ ಸಹಿಸಲಿ? ನಾನು ಸಹನ ಮಾಡಬಹುದೇ! (ಬಿಕ್ಕುವನು.)

**ಧಾರವಾಡಃ**— ಅಣ್ಣಾ, ಎಷ್ಟು ಸೊರಗಿದ್ದಿಯೋ ! ಚಿನ್ನದಂತೆ ಹೊಳೆಯುತ್ತಿದ್ದ ನಿನ್ನ ಮೈಯು ಕಪ್ಪಿಟ್ಟು ಹೋಗಿದೆಯಲ್ಲ ! ಕೈಯೆಷ್ಟು ಬಡವಾಗಿವೆಯೋ !

**ಕಾರವಾರಃ**— ಆಹಾ ! ಕಣ್ಣೆಷ್ಟು ಒಳಸೇರಿವೆಯೋ ? ನೂರು ವರುಷದ ಬೇನೆಯಿಂದ ತೊಳಲಿದವನಂತೆಯಾಗಿರುವಿಯಲ್ಲ !

**ವಿಜಾಪೂರಃ**— ಬೇಗನೆ ಗುಣವಾದರೆ ಒಳಿತು. ಇಲ್ಲದಿದ್ದರೆ ಪರಿ ಣಾಮವು ವಿಪರೀತವಾಗ ಬಹುದು.

**ಮೈಸೂರಃ**— ಹೀಗಾಗ ಬೇಕಾದರೆ ಯಾವ ದೇವಿಯ ಕೋಪವೋ ಕಾಣೆನು. ಬೇಗನೆ ಗುಣವಾಗಬೇಕು.

**ಬೆಳಗಾಂವಿಃ—** (ಅವನ ಕೈ ಹಿಡಿದು) ಹೇಗೆ ಗುಣವಾಗಬೇಕು! ಹೇಗೆ ಗುಣವಾಗಬೇಕು! ಔಷಧವು ಉಂಟೇ! ಏನಾದರೊಂದು ಉಪಾಯವಿರುವದೇ!...ಇಲ್ಲ...ಇಲ್ಲ...ತಮ್ಮಾ ಗುಣವಾಗುವಂತೆ ತೋರುವದಿಲ್ಲ. ಹೀಗೆಯೇ ಹರಿಕಿನಲ್ಲಿ ಕಾಲು ಸಿಕ್ಕ ಹಾಗೆ ನನ್ನ ಬಾಳುವೆಯು. ಆ ದೇವಿಯ ಇಚ್ಛೆಯಾದರೂ ಹೀಗೆಯೇ ಉಂಟೆಂದು ಕಾಣುವುದು. ನನ್ನ ಬಾಳಿನ ಸಕ್ಕರೆಯು ತೀರಿತು. ನನ್ನ ಬಾಳಿನ ಹಣ್ಣು ಹುಣ್ಣಾಯಿತು. ... .. ನನಗೆ ನೆರಳಿನ ಕುಣಿತ ಕಾಣಹತ್ತಿದೆ.

**ಮೈಸೂರುಃ—** ತಮ್ಮಾ, ಹಾಗೆ ನುಡಿಯಬೇಡ. ವೇಳೆಯು ಒಂದೇ ಸ್ಥಿತಿಯಲ್ಲಿರುವದಿಲ್ಲ. ಹಗಲು ಇರುಳು ಕ್ರಮದಿಂದ ಬರುವವೆಂಬುದನ್ನು ನೀನು ಮರೆಯೆ?

**ಬೆಳಗಾಂವಿಃ—** ಅಣ್ಣಾ, ಬಲ್ಲೆನು. ಬಲ್ಲೆನು...... ಆದರೆ ಎಷ್ಟೋ ಜೀವಿಯ ಬಾಳು ಒಂದೇ ಒಂದು ರಾತ್ರಿಯಲ್ಲಿ ಸಂದಿ ಹೋಗುವದು. ಅವುಗಳಿಗೆ ಮುಂದಿನ ಜನ್ಮವೇ ಹಗಲು......ಆದಾದರು ಯಾರುಬಲ್ಲರು?

**ಮೈಸೂರುಃ—** ಜನ್ಮಾಂತರಕ್ಕಾದರೂ ಬೆಳಕು ಬರಲೇಬೇಕು. ಎರಡು ಕಣ್ಣು ಎರಡು ರೂಪುಗಳನ್ನು ನೋಡಬೇಕೆಂದು ದೇವರ ಸಂಕಲ್ಪವುಂಟು. ಹಿಂದಿನ ಇತಿಹಾಸಗಳನ್ನು ನಾವು ಓದಿ ನೋಡಿದ್ದುಂಟು... ನೀನು ಹೇಳಿದಂತೆ ನಿನ್ನ ನಾಡಿನಲ್ಲಿರುವದು ಕಷ್ಟವು. ತೀರ ಕಷ್ಟವು. (ಕಿವಿಯ ಮೇಲೆ ಕೈಯಿಟ್ಟುಕೊಳ್ಳುವನು.)

**ಧಾರವಾಡಃ—** ಹೀಗಿದ್ದರೆ ಬಾಳಿಕೆಯು ಬಲುಬಿಗಿಯು.

**ಬೆಳಗಾಂವಿಃ—** ಸುಳ್ಳೆಂದು ತಿಳಿಯಬೇಡಿರಿ. ನಾನು ಈವರೆಗೆ ಹೇಳಿದ ಎಲ್ಲ ಮಾತುಗಳು ನಿಜವಾಗಿರುವವು. ಬೇಕಾದರೆ ತೋರಿಸುವೆನು. ಬನ್ನಿರಿ.

**ವಿಜಾಪೂರಃ—**
**ಕಾರವಾರಃ—** } ಇರಬಹುದು. ಇರಬಹುದು. ಬಿಡು.

**ಬೆಳಗಾಂವಿಃ—** ಇಲ್ಲ. ಇಲ್ಲ. ಒಂದು ಓಣಿಯಲ್ಲಿ ತಿರುಗಿ ತೋರಿಸುವೆನು. ಬನ್ನಿರಿ. ನನ್ನ ಕಷ್ಟಮಯವಾದ ಆಯುಷ್ಯದ ಚಿತ್ರವು ಒಮ್ಮೆಯಾದರು ನಿಮ್ಮ ದೃಷ್ಟಿಯ ಮುಂದೆ ಬಂದು ಹೋಗಲಿ. ಬರ್ರಿ. ನಾವು

ಆಚೆಯು ಕಡೆಗೆ ಕುಳಿತರೆ ಎಲ್ಲವೂ ಕಾಣುವದು. ನೋಡಿದ ಮೇಲೆ ನನ್ನ ಅವಸ್ಥೆಯು ಹೀಗೇಕೆ ? ಎಂಬುವದು ಸ್ಪಷ್ಟವಾಗಿ ತಿಳಿಯುವದು. ಬನ್ನಿರಿ. ಬನ್ನಿರಿ. ( ಕೈಹಿಡಿದು ಕರೆದುಕೊಂಡು ಹೋಗುವನು. ಅವರಾದರೂ ಹೋಗುವರು.)

೨

(ಅದೇ ಬೀದಿ. ವಿಶಾಲವಾದ ಒಂದು ಮನೆಯು. ಮನೆಯು ಮುಂದೆ ಒಂದು ವಕೀಲರ ಪಾಟಿಯನ್ನು ಕಟ್ಟಿದೆ. ಪಾಟಿಯ ಮೇಲೆ ವಕೀಲರು ತಮ್ಮ ಹೆಸರನ್ನು ಮೊದಲು ಇಂಗ್ಲಿಷಿನಲ್ಲಿ, ಆ ಮೇಲೆ ಮರಾಠಿ [ಗೀರ್ವಾಣ ಭಾಷೆಯ ಅಕ್ಷರದಲ್ಲಿ] ಯಲ್ಲಿ ಕಡೆಗೆ ಸಂಕ್ಷೇಪವಾಗಿ ಕನ್ನಡದಲ್ಲಿ ಹಾಕಿ ಕಿರುವರು—

ಒಬ್ಬ ವಾಙ್ಮಯ ಸೇವಕನು ಪುಸ್ತಕಗಳ ಒಂದು ಗಂಟನ್ನು ಹೊತ್ತು ಕೊಂಡು ಬರುವನು. ಬಾಡಿದ ಮುಖ, ಮಾಸಿದ ಅರಿವೆ, ಸೋತ ಅವಯ ವಗಳಿಂದ ಮೆಲ್ಲಗೆ ಬರುವನು. ಬರುತ್ತ "ಉತ್ಕೃಷ್ಟವಾದ ಪುಸ್ತಕಗಳು. ನೋಡಿದರೆ ಬಿಡದಂತಹ ಗ್ರಂಥಗಳು. ವಿರಾಟ ಗ್ರಂಥಮಾಲೆಯ ಪುಸ್ತಕ ಗಳು" ಎಂದು ಕೂಗುತ್ತಿರುವನು. ಎದುರಿಗೆ ಕಂಡ ಒಬ್ಬ ವಕೀಲರ ಮನೆ ಯನ್ನು ಒಳಸೇರ ಬಯಸಿ—)

**ವಾಙ್ಮಯ ಸೇವಕಃ**— ಸ್ವಾಮಿಾ,.......ಒಳಗೆ ಯಾರಾದರೂ ಇರುವರೇ ?

**ವಕೀಲರುಃ**— [ಒಳಗಿನಿಂದ ಬಹಳ ಹೊತ್ತಿನ ಮೇಲೆ] ಯಾವ ಸ್ವಾಮಿಗಳು ಇಲ್ಲಿ ಇಲ್ಲ. ಹೋಗಿರಿ.

**ವಾಙ್ಮಯಃ**— ಪುಸ್ತಕ ಮಾರಾಟದವನು ಬಂದಿದ್ದೇನೆ. ಒಳಗೆ ಬರಬಹುದೇ ? ವಿರಾಟ ಗ್ರಂಥ ಭಾಂಡಾರದ ಪುಸ್ತಕಗಳು ಸುರಸ ಇವೆ.

**ವಕೀಲಃ**— ವಿರಾಟನು ಆ ಮಹಾಭಾರತದ ಯುದ್ಧಕಾಂಡದಿಂದ ನಿಮ್ಮಲ್ಲಿಗೆ ಬಂದಿರುವನೇ ! ದೈವವಂತರು. ಕಲಿಯುಗದ ಅರ್ಜುನರು ನೀವು. ಅವನನ್ನು ಹೊತ್ತುಕೊಂಡು ದಿಗ್ವಿಜಯಕ್ಕೆ ಬಂದಂತೆ ಕಾಣುವದು. (ಹೊರಗೆ ಬರುವನು)

**ವಾಙ್ಮಯಃ—** ಇಲ್ಲ ಸ್ವಾಮಿ. ನಮಗೇಕೆ ಅಷ್ಟು.

**ವಕೀಲಃ—** ( ಬಿಳಿಯ ಬತ್ತಿಯನ್ನು ಹೊತ್ತಿಸಿ, ಸೇದಿ, ಹೊಗೆ ಹೊರಗೆ ಬಿಟ್ಟು ಸುರುಳಿ ಸುರುಳಿಯಾದ ಹೊಗೆಯನ್ನು ನಿರೀಕ್ಷಿಸಿ,) ಆಂ... ಎಂಥ ಪುಸ್ತಕಗಳಿವೆ ?

**ವಾಙ್ಮಯಃ—** [ತನ್ನ ಗಂಟನ್ನು ಕೆಳಗೆ ಇಳಿಸಿ, ಬಿಚ್ಚಿ, ಒಂದು ಪುಸ್ತಕವನ್ನು ಕೈಯಲ್ಲಿ ತೆಗೆದುಕೊಂಡು, ವಕೀಲರಿಗೆ ಕೊಡಹೊಗುವನು] ನೋಡಿ. ಇದು......

**ವಕೀಲಃ—** ಅಲ್ಲಿಯೇ ಇರಲಿ. ಅಲ್ಲಿಯೇ ಇರಲಿ. ಕೇವಲ ಹೆಸರು ಹೇಳಿರಿ. ಹೆಸರು. ಹೆಸರಿನಿಂದ ನನಗೆ ತಿಳಿದು ಹೋಗುವದು.

**ವಾಙ್ಮಯ:—**[ಒಂದು ಪುಸ್ತಕವನ್ನು ಕೈಯಲ್ಲಿ ತೆಗೆದುಕೊಂಡು] ಇದು "ಜೀವನಜ್ಯೋತಿ" ಎಂಬ ಪುಸ್ತಕವು. ಪ್ರಸಿದ್ಧರಾದ ಶಾಲಿವಾಹನರು ಬರೆದಿರುವರು. ಪ್ರಸಿದ್ಧಿಸಿದ ಆರು ತಿಂಗಳಲ್ಲಿ ಸಾವಿರ ಪ್ರತಿಗಳು ಮಾರಾಟಾವವು. ಹಿಡಿಯಿರಿ [ಕೊಡಹೋಗುವನು ]

**ವಕೀಲ:—** ನಿಮ್ಮ ಹತ್ತರವೇ ಇರಲಿ. ಹೆಸರು ಮಾತ್ರ ಓದಿರಿ. ಹೆಸರಿನಿಂದ ನಮಗೆ ಸಂಪೂರ್ಣ ತಿಳಿದು ಹೋಗುವದು. ಉಳಿದ ಪುಸ್ತಕಗಳ ಹೆಸರು ಹೇಳಿರಿ.

**ವಾಙ್ಮಯಃ—** [ಮನದೊಳಗೆ] ಅಬ್ಬಾ, ಹೆಸರಿನಿಂದ ತಿಳಿಯುವದೇ ? (ಒಂದೊಂದು ಪುಸ್ತಕವನ್ನು ಕೈಯಲ್ಲಿ ತೆಗೆದುಕೊಂಡು) ಇದು "ಯುಗಾಂತರವಾಣಿ" ಪ್ರಸಿದ್ಧರಾದ ಮೇರುಗಿರಿಯಾಚಾರ್ಯರು ಬರೆದಿರುವರು. ಈ ಪುಸ್ತಕಕ್ಕಾಗಿ ಸಾವಿರ ರೂಪಾಯಿ ಬಹುಮಾನವಾಗಿ ಲೇಖಕರಿಗೆ ದೊರೆತಿವೆ. ಪ್ರತಿಗಳು ತುಸುವೇ ಉಳಿದಿರುತ್ತವೆ. ಇದು "ಪಾಕಶಾಸ್ತ್ರ" ಯೋಗಿಗಳಾದ ಮಾಳವ ದೇವಪ್ಪನವರು ವಿವರಣೆ ಸಹಿತವಾಗಿ ಬರೆದಿರುವರು. ಇದನ್ನು ಓದಿ ಮನನ ಮಾಡಿಕೊಂಡವರು ಒಂದೇ ಒಂದು ಕಾಳಿನಲ್ಲಿ ಅನೇಕ ರಸಯುಕ್ತವಾದ ಖಾದ್ಯ, ಪೇಯಗಳನ್ನು ಮಾಡುವರು. ಗೋದಿಯಿಂದ ೫೦ ತರದ ಅಡಿಗೆಯನ್ನು ಮಾಡಬಹುದೆಂದು ಹೇಳುವರು. ಈ ಗ್ರಂಥವನ್ನು ಓದಿದವರು ಬರಗಾಲದಲ್ಲಿಯೂ ಬದುಕಬಹುದೆಂದು ವೈದ್ಯ ವಿಶಾರದ ಚಂಪೂ ನಾರಾಯಣರು ಅಭಿಪ್ರಾಯ ಕೊಟ್ಟಿರುವರು. ಮನೆಗೊಂದು ಈ ಪುಸ್ತಕವು ಬೇಕೇ ಬೇಕು. ಇದು "ಕಾವ್ಯ ಸೃಷ್ಟಿ" ಯು.

ಕೊಳಲಿ ಬಳಲಿದ ಜೀವನದಲ್ಲಿ ಹೊಸದೊಂದು ಲೋಕವನ್ನು ಕಲ್ಪಿಸಿ ರಮ್ಯವಾಗಿ ಆಯುಷ್ಯವನ್ನು ಕಳೆಯಲಿಕ್ಕೆ ಈ ಗ್ರಂಥದ ಪಠಣವು ಅವಶ್ಯವೆಂದು ಗ್ರಂಥಕರ್ತರಾದ ಬದರಿಕಾಶ್ರಮನಿವಾಸಿಗಳಾದ ವೀಣೆಯ ಗೋವಿಂದ ರಾಜರು ಹೇಳುವರು. ಕಾವ್ಯಗಳಲ್ಲಿ ಇದು ಅಗ್ರಗಣ್ಯವಾಗಿದೆ. (ಕಡೆಯದೊಂದು ತೆಗೆದು) ಇದು "ಸೂಳೆಯ ಸೋಜಿಗ" ವು. ಶ್ರೀ. ಚಾರುದತ್ತರು ಬರೆದಿರುವರು. ಇಂದಿನ ಸಮಾಜದಲ್ಲಿಯ ಸೂಳೆಯರ ನಡತೆಯನ್ನೂ, ಸೂಳೆಯರ ಮೇಲಿನ ಸಮಾಜದ ದೃಷ್ಟಿಯನ್ನೂ, ಸೂಳೆಯರು ಆಕ್ರಮಿಸಿದ ಸ್ಥಾನವನ್ನೂ ಚಿತ್ರಿಸಿ ಬಲವಾಗಿ ನಿಂದಿಸಿರುವರು.

**ವಕೀಲಃ**— ಹಾ. ಹಾ. ಏನದು ? ಹೇಳಿರಿ! ಆ ಪುಸ್ತಕವಾವುದು?

**ವಾಙ್ಮಯಃ**—"ಸೂಳೆಯ ಸೋಜಿಗ" ಇದು ಬೇಕೆ? ( ಕೊಡ ಹೋಗುವನು.)

**ವಕೀಲಃ**— (ಕನ್ನಡಕವನ್ನು ತೆಗೆದು ಒರಸಿ) ಅದರ ಬೆಲೆ ಏನು?

**ವಾಙ್ಮಯಃ**—ಮೂರು ಅರ್ಧ ರೂಪಾಯಿ. ಕೊಡಬಹುದೇ ?

**ವಕೀಲಃ** –( ಕನ್ನಡಕವನ್ನು ಸಿಕ್ಕಿಸಿಕೊಂಡು ) ಹೂ......ಬೆಲೆಯು ......ಹೆಚ್ಚು ... ಅಲ್ಲ ತಮ್ಮ ಹತ್ತರ ಇಂಗ್ಲೀಷ ಬರೆಹಗಾರರ ಪುಸ್ತಕಗಳಿಲ್ಲವೆ ? ಇಂಗ್ಲೀಷಿನಲ್ಲಿ ದೊಡ್ಡ ದೊಡ್ಡ ಬರೆಹಗಾರರುಂಟು. ಆ... ಇವನು ದೊಡ್ಡ ಬರೆಹಗಾರ ನಿರುವನಲ್ಲ ...ರೆನೋಲ್ಡನ ಪುಸ್ತಕಗಳುಂಟೇ ?

**ವಾಙ್ಮಯಃ**—ನನ್ನ ಹತ್ತರ ಇಂಗ್ಲೀಷ ಪುಸ್ತಕಗಳು ಹೇಗೆ ಬರಬೇಕು ? . ನಾನು ಕನ್ನಡಸಾಹಿತ್ಯಸೇವಕನು..... ಅದರ ಪ್ರಚಾರಕ್ಕೆ ಬಂದಿರುವೆನು.

**ವಕೀಲಃ** –ಇರಬಹುದು. ಅದರಲ್ಲೇನು ಅಡ್ಡಿ.......ಆದರೆ ಈ ಪುಸ್ತಕಗಳ ಸಂಗಡ ಉಳಿದ ಭಾಷೆಯ ಒಂದೆರಡು ಪುಸ್ತಕಗಳು ಇದ್ದರೆ ಒಳಿತು. ಒಂದಿಲ್ಲದಿದ್ದರೆ ಒಂದು ವ್ಯಾರಾಟವಾಗುವದು.

**ವಾಙ್ಮಯಃ**– ಈ ಪುಸ್ತಕಗಳಾದರೂ ಒಳ್ಳೆಯವುಂಟು. ನೋಡಿರಿ.

**ವಕೀಲಃ**— ಇರಬಹುದು. ( ಹೊಗೆ ಬಿಡುವನು) ಬೇರೆ ಪುಸ್ತಕಗಳಿಲ್ಲವೇ ?

**ವಾಙ್ಮಯಃ**— ಬೇರೆ ಪುಸ್ತಕಗಳು ನನ್ನ ಹತ್ತರ ಇಲ್ಲ. ಸರ್ವರಿಗೂ ಸೇರಿಕೆಯಾಗುವಂತಹ ಪುಸ್ತಕಗಳನ್ನು ನಾವು ಪ್ರಸಿದ್ಧಿಸಿದ್ದೇವೆ. ಇವುಗಳಲ್ಲಿ ನಿಮಗೆ ಸೇರುವ ಒಂದು ಪುಸ್ತಕವೂ ಇಲ್ಲವೆಂದು ತಿಳಿದಿರುವಿರೇನು ? ಹಾಗೇನು ಇಲ್ಲ. ನಿಮಗೆ ಯಾವ ಜಾತಿಯ ಪುಸ್ತಕಗಳು ಬೇಕು ಹೇಳಿರಿ.

**ವಕೀಲಃ**— ಉಳಿದ ಪುಸ್ತಕಗಳ ಬೆಲೆ ಏನು ?

**ವಾಙ್ಮಯಃ**— (ಪ್ರತಿಯೊಂದು ಪುಸ್ತಕದ ಬೆಲೆ ನೋಡಿ) ಜೀವನ ಜ್ಯೋತಿಯ ಬೆಲೆಯು ೫ ರೂಪಾಯಿ. ಯುಗಾಂತರ ವಾಣಿಗೆ ೭ ರೂ. ೪ ಆಣೆ. ಪಾಕಶಾಸ್ತ್ರಕ್ಕೆ ೪ ರೂಪಾಯಿ ೮ ಆಣೆ. ಕಾವ್ಯಸೃಷ್ಟಿಗೆ ಮೂರು ರೂಪಾಯಿ. ಮತ್ತು ಸೂಳೆಯ ಸೋಜಿಗದ ಬೆಲೆಯನ್ನು ಬಲ್ಲಿರಿ.

**ವಕೀಲಃ**—(ಚು. ಚು. ಚು. ಮಾಡುವನು.) ಬೆಲೆಯು ಬಹಳ. ಬೆಲೆಯು ಬಹಳ.

**ವಾಙ್ಮಯಃ**—ನೋಡಿರಿ. ಪುಸ್ತಕಗಳನ್ನಾದರೂ ನೋಡಿರಿ ಕಟ್ಟು, ಮುದ್ರಣ, ಕಾಗದ, ಪುಟ, ವಿಷಯ, ಉಪಯೋಗ ಇವುಗಳನ್ನು ನೋಡಿರಿ.

**ವಕೀಲಃ**— (ಒಂದಿಷ್ಟು ಕೋಪವನ್ನು ತೋರಿಸಿದವನಂತೆ) ಎಲ್ಲವನ್ನು ನೋಡಿದ್ದಾಯಿತು........ ಅಲ್ಲ ....... ಇಂದಿನ ಜನರ ಆಯುಷ್ಯ, ಪ್ರೇಮ, ಪ್ರಾಪ್ತಿ ಎಲ್ಲವು ಸೂಕ್ಷ್ಮವಾಗಿವೆ. ನಿಮ್ಮ ಪುಸ್ತಕಗಳ ಬೆಲೆಯಾದರೂ ಸೂಕ್ಷ್ಮವಾಗಬಾರದೇ ? (ಹೊಗೆ ಹೊರಗೆ ಹಾಕುವನು.)

**ವಾಙ್ಮಯಃ**—(ಮಾತಾಡಲಿಕ್ಕೆ ತಿಳಿಯದವನಾಗಿ) ಸ್ವಾಮಿಾ, ಒಂದು ಪುಸ್ತಕವನ್ನು ತೆಗೆದುಕೊಂಡು ಪ್ರೋತ್ಸಾಹಿಸಿರಿ. ಮಹಾ ಪ್ರಯಾಸ ಬಟ್ಟು ಗ್ರಂಥ ಭಾಂಡಾರವನ್ನು ತೆಗೆದಿರುವೆವು. ಕರ್ನಾಟಕದಲ್ಲಿ ಇಂತಹ ಪುಸ್ತಕಗಳು ಈ ವರೆಗೂ ಹುಟ್ಟಿಯಿಲ್ಲ. ನಿಮ್ಮಂತಹ ದೊಡ್ಡ ದೊಡ್ಡ ಜನರು ಸಹಾಯಮಾಡದಿದ್ದರೆ ದೊಡ್ಡ ದೊಡ್ಡ ಪುಸ್ತಕಗಳು ಪ್ರಚಾರದಲ್ಲಿ ಹೇಗೆ ಬರಬೇಕು? ಹೇಗೆ ಹುಟ್ಟಬೇಕು? ಸಮಾಜವು ಹೇಗೆ ಸುಧಾರಿಸಬೇಕು?... ನಮ್ಮ ನೆರೆನಾಡಿನವರು ವಾಙ್ಮಯದಲ್ಲಿ ಅನೇಕದಾರಿ ಮುಂದಿರುವರು. ನಾವು ಹಿಂದೆ, ತೀರ ಹಿಂದೆ ಉಳಿದಿರುವೆವು. ಅದರ ನಿವಾರಣೆಗಾಗಿ ನಾವು

ಈ ಗ್ರಂಥ ಭಾಂಡಾರವನ್ನು ತೆರೆದಿರುವೆವು. ಏನಾದರು ಮಾಡಿ ಒಂದಾದರು ಪುಸ್ತಕವನ್ನು ಕೊಂಡು ಎತ್ತಿಹಿಡಿಯಿರಿ....... ಹಾಗೇ ಕಳುಹಬೇಡಿರಿ..... ಬೆಲೆಯಲ್ಲಿ ನೋಡಿದರೆ ಕಾವ್ಯ ಸೃಷ್ಟಿಯು ಒಂದಿದೆ.

**ವಕೀಲಃ**—ಒಂದು ಪಾನು ತೆರೆದು ಓದಿರಿ.

**ವಾಙ್ಮಯಃ**—ಹಿಡಿಯಿರಿ. ನೀವೇ ಓದಿರಿ.

**ವಕೀಲಃ**—ನೀವೇ ಓದಿ ಬಿಡಿರಿ. ನೀವೇ ಓದಿ ಬಿಡಿರಿ. ಅಲ್ಲಿಯೇ ಕುಳಿತು ಓದಿ ಬಿಡಿರಿ. ನನಗೆ ತಿಳಿಯುವದು.

**ವಾಙ್ಮಯ:**—( ಒಂದು ಕವಿತೆಯನ್ನು ಹಾಡುವನು. )

**ವಕೀಲಃ**—( ಮುಖವನ್ನು ಮುದುಡಿಸಿ ) ಇದು ಕನ್ನಡವಲ್ಲವೇ?

**ವಾಙ್ಮಯಃ**-ಹೌದು. ಶುದ್ಧಗನ್ನಡದಲ್ಲಿ ಬರೆದಿದೆ....ಇದನ್ನು ಓದುತ್ತ ಹೋದಂತೆ ಹೃದಯದ ತಂತಿಯು ಮಿಾಟುತ್ತ ಹೋಗುವುದು. ಆನಂದ ಸಾಗರದಲ್ಲಿ ಲೋಲಾಡುವ ನಾವೆಯಲ್ಲಿ ಕುಳಿತು ತೇಲಿಕೊಂಡು, ತೂರಿ ಕೊಂಡು ಬರುವ ಸುಖಾಮೃತವನ್ನು ಉಂಡು, ಉಂಡು, ತಿಂದು, ತಿಂದು, ಕುಡಿದು, ಕುಡಿದು, ಮುಂದೆ ಯಾವ ಕಡೆಗೆ ಹೋಗಬೇಕೆಂಬುವುದು ತಿಳಿ ಯದೆ ಮುಗ್ಧರಾಗಿ, ಮೂಢರಾಗಿ ನಿಲ್ಲುವೆವು. ಇಹವನ್ನೂ ಪರವನ್ನೂ ಮರೆತು ಅನಂತದಲ್ಲಿ ಅಡಗಬಯಸುವವರು ಕಾವ್ಯಸೃಷ್ಟಿಯನ್ನು ಓದ ಬೇಕು. ಎಲ್ಲರು ಇದರ ಪ್ರಶಂಸೆ ಮಾಡುವರು. ದು:ಖದ ಸಮಯದಲ್ಲಿ ಓದಿದರೆ ಹೃದಯಕ್ಕೂ, ಮನಸಿಗೂ ಆನಂದವಾಗುವದು. ಒಂದು ಪ್ರತಿ ಕೊಡಲೆ?

**ವಕೀಲಃ**—(ಸಿವ್ಹಿಲ್ ಪ್ರೋಸಿಜರ ಕೋಡಿನೊಳಗಿನ ಒಂದು ಕಾಯದೆಯ ಕಲಮನ್ನು ಉದಹರಿಸುವವರಂತೆ).......ಅಲ್ಲ......ಒಂದಾಣೆ ಎರಡಾಣೆಯ ಬೆಲೆಯ ಪುಸ್ತಕಗಳು ತಮ್ಮ ಹತ್ತರ ಇಲ್ಲವೇನು? ಇಷ್ಟು ಬೆಲೆಯ ಪುಸ್ತಕಗಳನ್ನು ಯಾಕೆ ಬರೆಯುವಿರಿ! ಈ ಊರಲ್ಲಿ ಇವುಗಳನ್ನು ಯಾರೂ ಕೊಳ್ಳುವದಿಲ್ಲ. ಒಂದಾಣೆ, ಎರಡಾಣೆಯ ಬೆಲೆಯ ಪುಸ್ತಕಗಳು ಇದ್ದರೆ ನಾವಾದರು ಸುಲಭವಾಗಿಕೊಂಡು ಓದಬಹುದು. ನಮ್ಮ ಹುಡುಗರಿಗೂ ಕೊಡಬಹುದು. ಒಂದಾಣೆಯವು ಇದ್ದರೆ ಎರಡು ಕೊಡಿರಿ. ನಮ್ಮ ಕಿಟ್ಟಿಗೆ ಒಂದು. ಮತ್ತು ಪುಟ್ಟಿಗೆ ಒಂದು. ಎರಡು ಕೊಡಿರಿ.

( ಕೆಮ್ಮುವನು. ಬಿಳಿಯ ಬತ್ತಿ ಆರಿರುವುದು. ಕಡ್ಡಿ ಕೆರೆದು ಮತ್ತೆ ಹೊತ್ತಿಸುವನು. ಸೇದಿ ಹೊಗೆ ಬಿಡುವನು. )

**ವಾಙ್ಮಯಃ**— ಅಂಥ ಪುಸ್ತಕಗಳು ನನ್ನ ಹತ್ತರ ಇಲ್ಲ ಸ್ವಾಮಿ. ಮಕ್ಕಳಿಗೆ ಕೊಡುವ ಗುಬ್ಬಿ-ಕಾಗೆಯ ಕತೆಗಳು ಕವಿತೆಗಳು ನಮ್ಮ ಹತ್ತರ ಇಲ್ಲ.

**ವಕೀಲಃ**— ಅವು ಬಹಳ ಒಳ್ಳೆಯವು. ಎಲ್ಲರು ಅವುಗಳನ್ನು ಪ್ರೀತಿಯಿಂದ ಓದುವರು. ಕನ್ನಡ ಭಾಷೆಗೆ ಅವೇ ಬೇಕು.

**ವಾಙ್ಮಯಃ**— ಹಾಗಾದರೆ ಒಂದು ಪ್ರತಿಯನ್ನು ಸಹ ಕೊಳ್ಳುವದಿಲ್ಲವೇ ? ಸ್ವಾಮೀ, ಇದರಲ್ಲಿ ಗ್ರಂಥಕರ್ತರಿಗಾಗಲಿ ಮಾರುವವರಿಗಾಗಲಿ ಎಳ್ಳಷ್ಟೂ ಪ್ರಾಪ್ತಿ ಇಲ್ಲ. ಕೇವಲ ಗ್ರಂಥಕ್ಕೆ ತಗಲಿದ ಬೆಲೆಯನ್ನಷ್ಟೇ ಸೇರಿಸಿದೆ. ಅಷ್ಟನ್ನಾದರೂ ಕೊಂಡು ಓದುಗರು ಹೆಚ್ಚಲೆಂದು ಕಡಿಮೆ ಬೆಲೆ ಇಟ್ಟಿದೆ. ನಮ್ಮ ಲಾಭವನ್ನು ಸೇರಿಸಿದ್ದರೆ ಈಗಿನ ಬೆಲೆಯ ಮೂರಷ್ಟು ಒಂದೊಂದು ಪುಸ್ತಕಕ್ಕೆ ತಗಲುತ್ತಿದ್ದಿತು. ಒಂದು ಕೊಳ್ಳಿರಿ. ಪ್ರೋತ್ಸಾಹಿಸಿರಿ. ಮಾಲೆಗೆ ಸಹಾಯ ಮಾಡಿರಿ. ನಿಮ್ಮ ಹಣದ ಸದುಪಯೋಗವನ್ನು ಮಾಡಿಕೊಳ್ಳಿರಿ.... ಕಡಿಮೆಯ ಬೆಲೆಯ ಒಂದು ಪುಸ್ತಕವಾದರೂ ನಿಮ್ಮ ಮನೆಯನ್ನು ಸೇರಲಿ. ಒಂದು ಕೊಳ್ಳಿರಿ.... ಕೊಡಲೇ ?

**ವಕೀಲಃ**— (ಅರ್ಗ್ಯುಮೆಂಟು ಕೊಡುವವರಂತೆ) ಏನು ನಿಮಗೆ ತಿಳಿಯುವುದು ಹಣದ ಬೆಲೆಯು ! ನಾಲ್ಕಾರು ರೂಪಾಯಿಗಳು ಕೈ ಸೇರಬೇಕಾದರೆ ಕಣ್ಣೀರು ಕಪಾಳಿನ ಮೇಲೆ ಇಳಿಯುವವು. ೫೦—೬೦ ಪುಟದ ಪುಸ್ತಕಕ್ಕೆ ಮೂರು-ನಾಲ್ಕು ರೂಪಾಯಿ ಬೆಲೆ ಇಡುವದೆಂದರೆ ಎಂಥ ಮಾತು ! ಇಷ್ಟೇ ದಪ್ಪ ಪುಸ್ತಕಗಳನ್ನು, ಇಂಥ ವಿಷಯಗಳನ್ನೇ ಒಳಗೊಂಡವುಗಳನ್ನು ಆಣೆಯೋ, ಎರಡಾಣೆಯೋ ಬೆಲೆಗೆ ಒದಗಿಸಿ ಕೊಡಬೇಕು. ಅಂದರೆ ಮಾತ್ರ ನಿಜವಾದ ವಾಙ್ಮಯಸೇವೆ. ಆಪಾದ್ರಿಯ ಜನರನ್ನು ನೀವು ನೋಡಿಲ್ಲವೇ ? ಕಾಗದ ಎಂಥ ನುಣುಪು. ಮುದ್ರಣ ಎಂಥ ಸ್ವಚ್ಛ. ಪುಸ್ತಕ ಎಂಥ ಮುದ್ದು. ಇದಲ್ಲದೆ ಸಾವಿರಾರು ಪುಟದ ಪುಸ್ತಕದ ಬೆಲೆ ಬಹಳವಾದರೆ ನಾಲ್ಕಾಣೆ. ಒಂದು ಪಾವಲಿ. ನಿಮ್ಮ ಪುಸ್ತಕದ ಬೆಲೆ ನಾಲ್ಕಾರು ರೂಪಾಯಿ ! ಇಷ್ಟು ಹಣದಲ್ಲಿ ನಮ್ಮ ಒಂದು ತಿಂಗಳ ಚಹಾ

ಸಿಗರೇಟು ಆಗುವದು. (ಆರಿದ ಬಿಳಿಯ ಬತ್ತಿಯನ್ನು ಹೊತ್ತಿಸಿ, ಸೇದಿ, ಹೊಗೆಯನ್ನು ಮೆಲ್ಲಗೆ ಬಿಡುವನು.) ಏನೇ ಆಗಲಿ. ಕನ್ನಡಭಾಷಾಸೇವಕರು ಎನ್ನುವಿರಿ. ನಾನು ಪ್ರೀತ್ತಿಸುತಿದ್ದ ಭಾಷೆಯು ಬೇರೊಂದು ಇದ್ದರೂ ಒಂದಾಣೆಯ ಪುಸ್ತಕಗಳಿದ್ದರೆ ಕಿಟ್ಟಿಗೆ ಮತ್ತು ಪುಟ್ಟಿಗೆ ಒಂದರಂತೆ ಎರಡು ಕೊಡಿರಿ. ಸಧ್ಯ ಅಷ್ಟು ಸಾಕು...... ಇವೇನು...... ಬೇಡ. (ಹೊಗೆ ಹೊರಗೆ ಹೊರಡುವದು ಬಾಯಿಂದ.)

**ವಾಙ್ಮಯಃ**— (ಉದಾಸೀನತೆಯಿಂದ) ನನ್ನಲ್ಲಿ ಇಲ್ಲ. ನಾನು ಹೋಗಬಹುದೇ? (ಎನಲು ವಕೀಲರು ತಲೆಯನ್ನು ಕೊಡಹುವರು. ವಾಙ್ಮಯ ಸೇವಕನು ಗಂಟು ಕಟ್ಟುವನು. ಮಧ್ಯೆ, ಮಧ್ಯೆ, ಉಸ್ ಉಸ್ ಎನ್ನುವನು. ಕಡೆಗೆ ಗಂಟು ಬಗಲಿಗೆ ಹಾಕಿಕೊಂಡು) ಒಂದು ಪುಸ್ತಕವನ್ನು ಸಹ ಕೊಳ್ಳುವದಿಲ್ಲವೇ? (ಮರುಗುತ್ತ) ಒಂದು ಪುಸ್ತಕವನ್ನು ಸಹ ಕೊಳ್ಳುವದಿಲ್ಲವೇ? ಕಾಗೆ-ಗುಬ್ಬಿಯ ಕತೆಯನ್ನು ಓದುವ ಸಮಾಜವು ಇನ್ನೂ ಇದೆಯೋ? ಹಾ. ಈ ಊರಲ್ಲಿ ನಾಲ್ಕು ಪ್ರತಿಗಳು ಸಹ ಮಾರಲಿಲ್ಲ. ಸಮಾಜದಲ್ಲಿ ಓದುವವರಿಲ್ಲವೇ? ಹಾಳಾಯಿತು. ಹಾಳಾಯಿತು. ನಾನು ಇಷ್ಟು ಶ್ರಮವನ್ನು ಅನ್ಯದೇಶದಲ್ಲಿ ಮಾಡಿದ್ದರೆ ನನ್ನ ಅವಸ್ಥೆಯು ಹೀಗಾಗುತ್ತಿದ್ದಿಲ್ಲ. (ಇಳಿಮೋರೆಯಿಂದ ಹೋಗುವನು. ವಕೀಲರು ಮನೆಯ ಒಳಗೆ ಗುಣುಗುಣು ಹಾಡುತ್ತ ಸೇದಿ ಹೊಗೆ ಬಿಡುತ್ತ ಅಟ್ಟಹಾಸದಿಂದ ಹೋಗುವರು.)

## ೩

(ಅದೇ ಬೀದಿ. ಇನ್ನೊಂದು ಮನೆಯು. ಮನೆಯ ಮುಂದೆ ಡಾಕ್ಟರರ ಪಾಟಿಯು ಮೇಲಿನ ಪಾಟಿಯಂತೆ ಬರೆಹಗಳನ್ನು ಧರಿಸಿಕೊಂಡು ತೂಗಾಡುತ್ತಿದೆ.

ವ್ಯಾಯಾಮ ಸಾಲೆಯ ಒಬ್ಬ ವಿದ್ಯಾರ್ಥಿಯು ಬರುವನು. ನಗುವ ಮುಖ. ಅಂಗಾಂಗದಲ್ಲಿ ಉತ್ಸಾಹವು ಉಕ್ಕುತ್ತಿದೆ. ಬಲಿತು ಬೆಳೆದುಕೊಂಡ ದೇಹ. ವಿಶಾಲವಾದ ಹಣೆ. ಉಲ್ಲಾಸದಿಂದ ಓಣಿಯಲ್ಲಿ ತಿರುಗಾಡಿ ತನ್ನ ಕೈಯೊಳಗಿನ ಒಂದು ಕಾಗದವನ್ನು ತೆರೆದು ನೋಡಿ ಓಣಿಯಲ್ಲಿ ಹುಡು

ಕಾಡುವನು. ಆ ಡಾಕ್ಟರರ ಪಾಟಿಯನ್ನು ನೋಡಿ, ಹರ್ಷಭರಿತನಾಗಿ ಕಾಗದವನ್ನು ಮಡಿಚಿ ಜೇಬಿನಲ್ಲಿಟ್ಟುಕೊಂಡು ಅವರ ಮನೆಯ ಹೊಸ್ತಿಲ ವರೆಗೆ ಹೋಗಿ-)

**ವ್ಯಾಯಾಮಃ—** (ಇಣಿಕಿಕ್ಕಿ ನೋಡಿ,) ಒಳಗೆ ಯಾರಿರುವರು ? ರಾಯರೇ........ ರಾಯರೇ.......

**ಡಾಕ್ಟರಃ—** (ಒಳಗಿನಿಂದ ಗಡಬಿಡಿಯಿಂದ) ಯಾರು? ಯಾರು? ರೋಗಿಯೋ ?... ಏನಾಗಿದೆ? ನಿಮ್ಮ ಮನೆಯಲ್ಲಿ ಯಾರಾದರು ಸೀರಿಯಸ್ (Serious) ಇರುವರೇ ? ಯಾವ ಬೇನೆಯು? ನೀವು ಬರುವ ಮುಂದೆ ರೋಗಿಯು ಯಾವ ಸ್ಥಿತಿಯಲ್ಲಿ ಇದ್ದನು? ಏನು? ಏನು? ಅವರಿಗೆ ಮೊದಲಿನಿಂದ ರೋಗವಿದ್ದಿತೇ ? (ನಲಿಕೆಯನ್ನು ಕೈಯಲ್ಲಿ ಹಿಡಿದುಕೊಂಡು ಹೊರಗೆ ಬರುವನು.)

**ವ್ಯಾಯಾಮಃ—** (ಒಂದಿಷ್ಟು ಬೆರಗಾಗಿ .. ರಾಯರ ಮುಖವನ್ನು ತೀಕ್ಷ್ಣವಾಗಿ ನಿರೀಕ್ಷಿಸುವನು ಒಂದೆರಡು ನಿಮಿಷ ತಡೆದ ಮೇಲೆ) ರಾಯರೇ ನಾನು ಅದಾವುದಕ್ಕೆ ಬಂದವನಲ್ಲ.....

**ಡಾಕ್ಟರಃ—** (ಒಂದು ಉಸಿರನ್ನು ಬಿಟ್ಟು) ಹಾಗಾದರೆ ನನ್ನಲ್ಲಿ ತಮ್ಮ ಕೆಲಸವೇನು ?

**ವ್ಯಾಯಾಮಃ—** ನಿಮ್ಮೂರಲ್ಲಿ ವ್ಯಾಯಾಮ ಶಾಲೆಯೊಂದನ್ನು ತೆಗೆಯಬೇಕೆಂದಿರುವೆನು. ತಮ್ಮ ಕೈಲಾದ ಮಟ್ಟಿಗೆ ಸಹಾಯ ಮಾಡಬೇಕು. ನಾಡಿನ ಜನರು ಆರೋಗ್ಯಕ್ಕೆ ಹೆಚ್ಚು ಮಹತ್ವವನ್ನು ಕೊಡದ್ದರಿಂದ ಎಲ್ಲೆಡೆಗೆ ಅನಾರೋಗ್ಯವು ಹೆಚ್ಚಾಗಿದೆ. ಜನಾಂಗವು ಕೆಟ್ಟು ಹೋಗಿದೆ. ಅದರ ಸುಧಾರಣೆಗೆ ಊರಿಗೊಂದು ವ್ಯಾಯಾಮ ಸಾಲೆಯು ಅವಶ್ಯವಾದುದುಂಟು.

**ಡಾಕ್ಟರಃ—** ಅನಾರೋಗ್ಯವು ಹರಡಿದೆಯೆಂದು ಯಾರು ತಮಗೆ ಹೇಳಿದರು ?

**ವ್ಯಾಯಾಮಃ—** ಯಾರು ಏಕೆ ಹೇಳುವುದು ? ಸರಕಾರವು ಸಾಕಷ್ಟು ಸಾಧಾರಗಳನ್ನು ಕೊಟ್ಟಿರಲು ಬೇರೆಯವರು ಹೇಳುವದರಲ್ಲೇನಿದೆ..... ಹಿಂದುಸ್ತಾನದ ಪ್ರತಿಯೊಬ್ಬನ ಆಯುಸ್ಸಿನ ಸರಾಸರಿಯು ೨೫

ಇರುವದೆಂಬುವುದನ್ನು ತಾವು ಬಲ್ಲಿರಷ್ಟೇ? ಈ ವರುಷ ಅದಕ್ಕೂ ಕಡಿಮೆ ಯೆಂದು ಓದಿದ್ದುಂಟು.

**ಡಾಕ್ಟರ:**— ಏನೋ ಎಂತೋ ನಿಮ್ಮ ಹೇಳಿಕೆಯು...... ನಾನು ಡಾಕ್ಟರನಾಗಿ ಇಪ್ಪತ್ತು ವರುಷವಾಗುತ್ತ ಬಂದಿತು. ಇಷ್ಟು ಕಾಲ ನಾನೂ ಚನ್ನಾಗಿ ಅಭ್ಯಾಸ ಮಾಡಿರುವೆನು. ಸಮಾಜದಲ್ಲಿ ಆರೋಗ್ಯವು ನೆಲೆಯೂರಿ ನಿಂತಿದೆ. ಇದು ಪ್ರಸಿದ್ಧ ಡಾಕ್ಟರ ವಕ್ರತುಂಡೆ ಇವರ ಅನುಭವವೆಂದು ತಿಳಿಯಿರಿ.

**ವ್ಯಾಯಾಮಃ**— ರಾಯರೇ, ತಾವು ಡಾಕ್ಟರಾದರೇನಾಯಿತು? ಅನಾರೋಗ್ಯವು ಬೆಳೆದದ್ದು ನಿಜವು. ... ನೀವು ಬೆಳೆದಿಲ್ಲವೆಂದು ಹೇಳಲಿಕ್ಕೆ ಆಧಾರಗಳುಂಟೋ ಏನಾದರು?

**ಡಾಕ್ಟರಃ**— ಇದರಲ್ಲೇನಿದೆ. ನಾನು ಕೆಲಸ ಮಾಡಹತ್ತಿ ೨೦ ವರ್ಷವಾಗ ಬಂದಿತೆಂದು ಆಗಲೆ ಹೇಳಿದೆನಲ್ಲವೆ. ಇಷ್ಟು ವರುಷದಲ್ಲಿ ಯಾವ ತಿಂಗಳು ನನಗೆ ನೂರಕ್ಕೂ ಹೆಚ್ಚು ರೋಗಿಗಳಿಲ್ಲ ಬೇಕಾದರೆ ನನ್ನ ಕಾಗದ ಪತ್ರಗಳನ್ನು ತೆಗೆದು ತೋರಿಸುವೆನು.... ಅಂದಮೇಲೆ ಅನಾರೋಗ್ಯವು ಎಲ್ಲಿ ಬೆಳೆಯಿತು. ಒಬ್ಬನಿಗೆ ಇಷ್ಟು ಸಹ ಬೇಡವೇ?

**ವ್ಯಾಯಾಮಃ**— ರಾಯರೇ, ಇಲ್ಲಿ ೨೦, ೩೦ ಜನ ಡಾಕ್ಟರರಿರುವರು. ಪ್ರತಿಯೊಬ್ಬನಿಗೆ ಅಜಮಾಸು ನೂರು, ನೂರು ಜನ ರೋಗಿಗಳಾದರೆ ಊರಿಗೆ ಎಷ್ಟು ರೋಗಿಗಳಾದರು....? ಅಂದಮೇಲೆ ಆರೋಗ್ಯವು ಎಲ್ಲಿ ಉಳಿಯುತು?

**ಡಾಕ್ಟರಃ**— (ಬೆಚ್ಚಿ) ಏನು ನಿಮ್ಮ ಸಿದ್ಧಾಂತವು! ಸಾಲು ಓಣಿಯಲ್ಲಿ ಮನೆಗೆ ಮೂರು-ನಾಲ್ಕು ಹಾಸಿಗೆಯಾದರು ಹಾಸಬೇಕು. ಬೀದಿಗುಂಟ ಬರುವಾಗ ನರಳುವುದೋ, ಬಡಬಡಿಸುವುದೋ, ಕೆಮ್ಮುವುದೋ, ಬಿಕ್ಕುವುದೋ, ಬಡಕೊಳ್ಳುವುದೋ, ಹೊಡಕೊಳ್ಳುವುದೋ ಕೇಳಬರಬೇಕು. ಚಾತುರ್ಮಾಸದ ಆಚಾರ್ಯರಂತೆ ಡಾಕ್ಟರರಿಗೆ ಹಗಲು-ರಾತ್ರಿ ರೋಗಿಗಳ ಆರೈಕೆಗೆ ವೇಳೆಯು ಸಾಲಬಾರದು. ಅಂದು ಮಾತ್ರ ಅನಾರೋಗ್ಯವೆಂದು ಬನ್ನಿರಿ. ದುಡ್ಡೆರಡು ದುಡ್ಡು ಕೊಡಬಹುದು...... ಇಂದೇನು ನಿಮಗೆ ಸಿಗಲಾರದು. ಹೊಟ್ಟೆಗೆ ರೊಟ್ಟಿ ಇಲ್ಲೆಂದು ಎಲ್ಲ ಡಾಕ್ಟರರು ಹೊಡೆದುಕೊಳ್ಳು

ತ್ತಿರುವಾಗ ರೋಗಿಗಳನ್ನು ಕಡಿಮೆ ಮಾಡುವ ತಮಗೆ—ಅಶ್ವಿನಿಕುಮಾರರಿಗೆ ಏನೂ ಸಿಗಲಾರದು. ರೋಗಿಗಳನ್ನು ಕಡಿಮೆ ಮಾಡಿ ನಮ್ಮ ಹೊಟ್ಟೆಗೆ ಕೇರಿನ ಸರವನ್ನು ಕಟ್ಟಿ, ಕವಡಿಯ ಬೂದಿಯನ್ನು ಹಚ್ಚಬೇಕೆಂದು ಮಾಡಿರುವಿರೇನು? ದಯಮಾಡಿಸಿರಿ. ದಯಮಾಡಿಸಿರಿ. ನಮ್ಮೂರಲ್ಲಿ ವ್ಯಾಯಾಮ ಶಾಲೆಯ ಅವಶ್ಯಕತೆ ಇಲ್ಲ. ನಿಮ್ಮೂರಿಗೆ ಹೋಗಿರಿ.
( ಡಾಕ್ಟರರು ಒಳಗೆ ಹೋಗುವರು )

**ವ್ಯಾಯಾಮ**:— ಮನೆಗೆ ಮೂರು-ನಾಲ್ಕು ಹಾಸಿಗೆಗಳು ಬಿದ್ದರೆ ಅನಾರೋಗ್ಯವು ಹಬ್ಬಿದಂತಾಗುವುದೇ! ಅಂಥದಿನಗಳು ಬರಬಹುದೇ! ನಿನ್ನ ಭಕ್ತರ ಬಯಕೆಯನ್ನು ಪೂರ್ಣಮಾಡಬಹುದೇ! ಆರೋಗ್ಯದ ಗಂಧಕೂಡ ಇಲ್ಲದಿದ್ದರೂ ಆರೋಗ್ಯವು ಇದೆಯನ್ನುವರಲ್ಲ? ಅಂಥ ದಿನಗಳು ಬಂದರೆ ಮುಂದೇನುಗತಿ. ಎಷ್ಟು ರೀತಿಯಿಂದ ಜನರು ಗೋಳಾಡಬೇಕು...... ಈ ಜನರು ಎಂದು ಕಣ್ಣು ತೆರೆಯುವರೋ! ಏನಾಗುವದೋ ಆಗಲಿ ಮುಂದಕ್ಕೆ ಹೋಗೋಣ. (ಹೋಗುವನು)

೪

(ಅದೇಬೀದಿ. ಮತ್ತೊಂದು ಮನೆಯು. ಮನೆಯ ಮುಂದೆ ಪಾಟಿ-ಗೀಟಿಯ ಆಡಂಬರವಿಲ್ಲ. ಕಿಡಿಕಿಗಳಿಗೆ ದೂಳಿಯ ಪರದೆಯನ್ನು ಕಟ್ಟಿರುವರು. ಅದರಂತೆ ಬಾಗಿಲಿಗೆ ಒಂದು ಬಿದುರಿನ ಪರದೆಯು ಹಳೆಯದು. ಅಲ್ಲಿ-ಇಲ್ಲಿ ಹರಿದದೆ.

ಒಬ್ಬ ವಿದ್ಯಾರ್ಥಿಯು ಬರುವನು ಕೈಯಲ್ಲಿ ಒಂದು ಡಬ್ಬಿಯನ್ನು ಹಿಡಿದಿರುವನು. ಬಗಲಿಗೆ ಒಂದು ಬಿರುದಿನ ಪಟ್ಟಿಯನ್ನು ಸಿಕ್ಕಿಸಿರುವನು. ಅವನ ಸಂಗಡ ಇನ್ನೊಬ್ಬನು ಇರುವನು. ಅವನ ಉಡಿಗೆ ತೊಡಿಗೆಗಳಲ್ಲಿ ಯಾವ ಆಡಂಬರವಿಲ್ಲ. ಸಂಗಡಿಗನು ಮೇಲಿನ ವಿದ್ಯಾರ್ಥಿಯ ಬೆನ್ನುಹತ್ತಿ ಬಂದಿರುವನು. ಒಂದಿಷ್ಟು ಚಿಕ್ಕವ. ಇಬ್ಬರೂ ಆಮನೆಯ ಮುಂದೆ ಬಂದು -ಕರ್ನಾಟಕ ಮಾತೆಗೆ ಗೆಲವಾಗಲಿ-ಎನ್ನುವರು. ಅವರಲ್ಲಿ ಹಿರಿಯವ ಮನೆಯ ಬಾಗಿಲ ಮುಂದೆ ಹೋಗಿ,— )

**ವಿದ್ಯಾರ್ಥಿ**:— ಒಳಗೆ ರಾಯರಿರುವರೇ ?

**ರಾಯರು**:— ಕೋಣ. ಕೋಣ. (कोण.)

**ವಿದ್ಯಾರ್ಥಿಃ**—(ತನ್ನ ಗೆಳೆಯನಿಗೆ) ಅ. ಕೋಣ! ಕೋಣ! ಕೋಣ ಬಂತು. ಹಾದೀಬಿಟ್ಟು ನಿಲ್ಲೋ. (ಬದಿಗೆ ಸರಿಯುವರು) ಬರಲಿ ರಾಯರೇ. ಕೋಣ ಬರಲಿ. ಕೋಣ ಬರಲಿ. ಮೆಲ್ಲಗೆ ಹೊಡಿಯಿರಿ. ಇಲ್ಲಿ ನಾವು ಮಗ್ಗಲಿಗೆ ನಿಂತಿರುವೆವು ಕೋಣಾ ಹೊಡೆಯಿರಿ.

**ರಾಯರುಃ**— (ಒಳಗಿನಿಂದ) ಯಾರು? (ಎನ್ನುತ್ತ ಹೊರಗೆ ಬರುವರು.)

**ವಿದ್ಯಾರ್ಥಿ:**—ಕೋಣಿಲ್ಲೇನರಿ ರಾಯರ..... ?

**ರಾಯರುಃ**—ಏಕೆ? ಏನು ಕೆಲಸ?

**ವಿದ್ಯಾರ್ಥಿಃ**—(ಕೆಮ್ಮಿ ಉಗುಳುನುಂಗಿ) ವಿದ್ಯಾರಣ್ಯರ ಪುಣ್ಯದಿವಸ ವನ್ನು ಮಾಡಬೇಕೆಂದಿರುವೆವು. ಅದಕ್ಕೆ... ತಮ್ಮ ಕಡೆಗೆ ಬಂದಿದ್ದೇವೆ.

**ರಾಯರುಃ**—(ತಲೆ ತುರಿಸಿಕೊಂಡು) ವಿದ್ಯಾರಣ್ಯ...... ?

**ವಿದ್ಯಾರ್ಥಿಃ**—ಅಹುದು. ವಿದ್ಯಾರಣ್ಯರು. ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರಾದ ಮಹಾಮುನಿ ವಿದ್ಯಾರಣ್ಯರು.

**ರಾಯರುಃ**— (ಎಳೆದೆಳೆದು) ವಿದ್ಯಾರಣ್ಯರೇ!......... ಉಹು ... . ....... ಅದೇಕೆ? (ಒಂದಿಷ್ಟು ತಿರಸ್ಕಾರದಿಂದ ಮೆಲ್ಲಗೆ) ಶಿವಾಜಿ ಮಹಾರಾಜರದು ಮಾಡುವಿರಿ ಸಾಕಲ್ಲೇನು ಮತ್ತೆ ಅವರದೇಕೆ ಒಣ ಖರ್ಚು. ಇಂತಹ ತುಟ್ಟಿಯದಿವಸದಲ್ಲಿ ಬಿಟ್ಟು ಬಿಡುವುದು ಒಳ್ಳೆಯದು.

**ವಿದ್ಯಾರ್ಥಿ:**— ರಾಯರೇ! ನಾವು ಕನ್ನಡಿಗರು ಕರ್ನಾಟಕದ ಉಪ್ಪನ್ನು ಉಣ್ಣುವವರು. ಕರ್ನಾಟಕದ ಮಣ್ಣಿನಿಂದ ಮೇಲೆದ್ದವರು. ಕರ್ನಾಟಕದಲ್ಲಿ ಇಂದಿಲ್ಲ ಮುಂದೆ ನೇರುವವರ; ಹೀಗಿದ್ದು ಕರ್ನಾಟಕದ ಮಹಾಪುರುಷರ ಹಬ್ಬನ್ನು ಬಿಡಬಹುದೇ! ಉಪವಾಸವಿದ್ದು ನಮ್ಮ ಪೂರ್ವಜರ ಪುಣ್ಯದಿವಸಗಳನ್ನು ಜರುಗಿಸುವದು ಶ್ರೇಯಸ್ಸಲ್ಲವೇ! ತುಟ್ಟಿಯ ದಿವಸಗಳೆಂದು ನಮ್ಮ ದಿನದ ತಿನಿಸು-ಉಣಿಸಿನಲ್ಲಿ ಯಾವ ಕೊರತೆಯಿದೆ? ಯಾವದಿಲ್ಲ. ಹೀಗಿದ್ದು ಮಹಾಮುನಿ ವಿದ್ಯಾರಣ್ಯರ ಸ್ಮರಣೆಯನ್ನು ಮಾಡದಿರೆಂದು ಹೇಳುವುದೇ! ಕರ್ನಾಟಕದಲ್ಲಿ ಹುಟ್ಟಿದ್ದ ಕ್ಕಾಗಿ ನಮ್ಮ ಪುಣ್ಯವನ್ನು ಒತ್ತಿ ಇಟ್ಟಾದರು, ಆ ಮಹಾಪುರುಷರ ದಿನಗಳನ್ನು ಮಾಡೇತೀರಬೇಕು.

**ರಾಯರು:—** ಹೀಗೆ ನೀವು ಕರ್ನಾಟಕ–ಮಹಾರಾಷ್ಟ್ರವೆಂಬ ಭೇದವನ್ನು ಕಲ್ಪಿಸಿ ದೇಶದ ಸಂಘಟನೆಯನ್ನು ಹಾಳುಮಾಡಿರುವಿರಿ. ವಿದ್ಯಾರಣ್ಯರು ಅದೇಕೆ ಬೇಕು ? ಅವರನ್ನು ಬಿಟ್ಟರೆ ನಡೆಯುವದಿಲ್ಲವೆ ?

**ವಿದ್ಯಾರ್ಥಿ:—**ರಾಯರೇ ಅದು ಹೇಗೆ ನಡೆಯಬೇಕು. ಅದು ಹೇಗೆ ನಡೆಯುವದು ಹೇಳಿರಿ ? ಸಿಟ್ಟಿಗೆ ಬರದಿದ್ದರೆ ಒಂದು ಮಾತು ಹೇಳುವೆನು. ಕೇಳಿರಿ. ನಿಮ್ಮ ತಂದೆಯ ಶ್ರಾದ್ಧಕರ್ಮವನ್ನು ನೀವು ಮಾಡುವಿರೆಂದು ನಾನು ನನ್ನ ತಂದೆಯ ಶ್ರಾದ್ಧವನ್ನು ಬಿಡಬಹುದೇ ! ನಿಮ್ಮ ತಂದೆಯಷ್ಟೇ ನನಗೆ ನನ್ನ ತಂದೆಯು ಪೂಜ್ಯನು. ವಿದ್ಯಾರಣ್ಯರು, ಮಹಾಮುನಿ ವಿದ್ಯಾರಣ್ಯರು ನಾಡಿನ ತಂದೆಗಳು. ಅವರು ನನ್ನ ತಂದೆಯ ತಂದೆಯು. ಅದರಂತೆ ನಿಮ್ಮ ತಂದೆಯ ತಂದೆಯು ನಿಮ್ಮ ಕುಲದ ತಂದೆಯು. ಅವರ ಪುಣ್ಯದಿವಸವನ್ನು ನಾನಲ್ಲ, ನೀವಲ್ಲ ರಾಷ್ಟ್ರವು, ಇಡೀ ಭಾರತ ವರ್ಷವು ಮಾಡಬೇಕು. ಅದು ನಮ್ಮ ಧರ್ಮ........ ಮಹಾರಾಷ್ಟ್ರದ ರಾಜ್ಯವು ವಿದ್ಯಾರಣ್ಯರ ವಿಚಾರದಿಂದಲೇ ಹುಟ್ಟಿರುವದೆಂದು ತಿಳಿಯಿರಿ.

**ರಾಯರು:—** ಈ ನಿಮ್ಮ ತಿಳಿವಳಿಕೆಯು ರಾಷ್ಟ್ರಕಾರ್ಯವನ್ನು ಹಾಳು ಮಾಡಿರುವುದು. ವಿದ್ಯಾರಣ್ಯ, ಕರ್ನಾಟಕ ಏಕೀಕರಣ ಮುಂತಾದ ಪ್ರಾಂತೀಯ ಭಾವನೆಯಿಂದ ರಾಷ್ಟ್ರಶಕ್ತಿಯು ಹಾಳಾಗಿ ಹೋಗಿರುವದು. ಅದಕ್ಕೆ ನೀವು ಕರ್ನಾಟಕದ ಬೆನ್ನುಬಿಡಬೇಕು. ಈ ಬ್ರಹ್ಮಾಂಡದಲ್ಲಿ ಕರ್ನಾಟಕವೇ ಹೆಚ್ಚಿನದೆಂದು ತಿಳದಿರುವಿರೇನು.........ಕರ್ನಾಟಕ ಮಾತಾಕೀಜಯ ಯಾಕೆ ನಿಮಗೆ ? ಹಿಂದಮಾತಾಕೀಜಯ ಸಾಲದೇನು?

**ವಿದ್ಯಾರ್ಥಿ:—** ವಿಶ್ವಪ್ರೇಮವನ್ನು ಕಲ್ಪಿಸಿಕೊಂಡ ನಿಮಗೆ ನಿಮ್ಮ ಹಿಂದುಸ್ತಾನವಾದರು ದೊಡ್ಡದಾಗುವುದೇ ? ವಿಶ್ವದ ಅಳತೆಯನ್ನು ನೀವು ಕಂಡದ್ದುಂಟೇ ? ಅದರ ವ್ಯಾಸವನ್ನು ಬಲ್ಲಿರಾ ?

**ರಾಯರು:—** (ಸಿಟ್ಟಿನಿಂದ) ಏನು ?.... ಎಷ್ಟಿದೆ ?

**ವಿದ್ಯಾರ್ಥಿ:—** ಬೆಳಕು ಸೇಕಂದಿಗೆ ೧೮೬ಸಾವಿರ ಮೈಲು ಓಡುವದು. ಅಂಥ ಬೆಳಕಿಗೆ ಬ್ರಹ್ಮಾಂಡದ ಒಂದು ತುದಿಯಿಂದ ಇನ್ನೊಂದು ತುದಿಗೆ ಮುಟ್ಟಲಿಕ್ಕೆ ೧೩ಸಾವಿರ ವರ್ಷಗಳು ಬೇಕಾಗುವವೆಂದು ಬಲ್ಲವರು ಹೇಳುವರು. ಅದು ಕೂಡ ಏಸುಪಾಲು ಸತ್ಯವೋ ಯಾರು ಬಲ್ಲರು.

ಇಂತಹ ಅನೇಕಾನೇಕವಾದ, ಅನಂತಾನಂತವಾದ, ಅಗವ್ಯವಾದ, ಅಜಿಂಕ್ಯವಾದ, ಅತರ್ಕ್ಯವಾದ, ಅಗಾಧವಾದ ಆಕಾಶದಲ್ಲಿ ಹಿಂದುಸ್ತಾನದ ಬೆಲೆಯೇನು ? ವಿಶ್ವದೊಳಗಿನ ಒಂದು ಪರಿಮಾಣುವಿನೊಳಗಿನ ಒಂದ ಸಹಸ್ರಾಣುವೋ ಕಡಿಮೆಯೋ! ಇಂಥ ಕಾಣದ ಸೊನ್ನೆಗಾಗಿ ಹೆಣ ಗಾಡುವ ಆ ಗಾಂಧಿ ಮಹಾತ್ಮನು ಶುಂಭನಲ್ಲವೇ?! ಹೌದು. ಹೌದು. ವಿಶ್ವವ್ಯಾಪಕ ವಿಚಾರದಲ್ಲಿ ಹಿಂದುಸ್ತಾನವು, ಕರ್ನಾಟಕವು ಸಮಾನ ವಾದವುಗಳು ................ ಹಿಂದಮಾತಾಕೀಜಯು ಎಂದ ಸ್ಥಳದಲ್ಲಿ ಕರ್ನಾಟಕ ಮಾತೆಗೆ ಜಯುವೆಂದರೆ ತಪ್ಪೇನು. ರಾಯರೇ, ತಿಳಿದು ನೋಡಿರಿ. ಎಲ್ಲವು ಸ್ಪಷ್ಟವಿದೆ......ಇಲ್ಲವಾದರೆ ಸ್ವರಾಜ್ಯದ ಹಂಬಲವನ್ನು ಕರ್ನಾಟಕದ ಏಳ್ಗೆಯ ಹಂಬಲವನ್ನು ಬಿಡಿರೆಂದು ರಾಷ್ಟ್ರ ಸಭೆಯುವ ರಿಗೂ, ಕರ್ನಾಟಕದ ಜನತೆಗೂ ತಿಳಿಸಿರಿ.........ಆ ಮುಂದೆ ಜಗತ್ತಿಗೆ ಜಯುವಾಗಲಿ, ಪೃಥ್ವಿಗೆ ಜಯುವಾಗಲಿ, ಏಸಿಯುಕ್ಕೆ ಜಯುವಾಗಲಿ, ಆಫ್ರಿಕೆಗೆ ಜಯುವಾಗಲಿ ಎನ್ನೋಣ.

**ರಾಯರು:**—(ಬೆಪ್ಪಾಗಿ) ಹೂ. ಹೀಗೇನು..... ..... ತಾವು ದೊಡ್ಡ ವೇದಾಂತಿಗಳು. ವೇದಾಂತಿಗಳು........ದತ್ತು ಚಾಣರೇ?.

**ವಿದ್ಯಾರ್ಥಿ:**—(ಕೆಲಹೊತ್ತು ಸುಮ್ಮನಿದ್ದು. ಕೈಗಳನ್ನು ಮುರಿದು ಕೊಂಡು) ಹೋಗಲಿ ಬಿಡಿರಿ...................ರಾಯರೆ............... ಮತ್ತೆ... ....ನಮಗೆ ಅದೆಲ್ಲ ವೇದಾಂತ ತೆಗೆದುಕೊಂಡು ಮಾಡುವದೇನು? ಈಗ ತಮ್ಮ ಕಡೆಯಿಂದ ಕೈಲಾದಮಟ್ಟಿಗೆ ಸಹಾಯುವಾಗಬೇಕೆಂದು ಕೇಳುತ್ತೇವೆ......

**ರಾಯರು:**— ಈಗೇನಿಲ್ಲ (ಒಂದು ಗುಟುಕು ಕುಡಿದು) ಈಗೇನಿಲ್ಲ.

**ವಿದ್ಯಾರ್ಥಿ:**—ಹಾಗಾದರೆ. ಮತ್ತೆ ಯಾವಾಗ ಬರಬಹುದು.

**ರಾಯರು:**—ಪಹಿಲಾ ತಾರೀಖಿಗೆ ಬರ್ರಿ. ಈಗಿಲ್ಲ.

**ವಿದ್ಯಾರ್ಥಿ:**— ರಾಯರೇ ಇದೇ ತಿಂಗಳ ೨೨ ನೇ ತಾರೀಖಿಗೆ ಇರುತ್ತಿರಲು ಮೊದಲನೇ ತಾರೀಖಿಗೆ ಹೇಗೆ ಬರುವುದು? ಕೈಲಾದ ಮಟ್ಟಿಗೆ ಈಗೇ ತಾವು ನೆರವಾಗಬೇಕು.

**ರಾಯರುಃ**—ಈಗ ನನ್ನ ಹತ್ತರ ಇಲ್ಲ. ಹೋಗಿರಿ...... ಇಲ್ಲ ಹೋಗಿರಿ. ( ಒಳಗೆ ಹೋಗುವರು. )

**ವಿದ್ಯಾರ್ಥಿಃ**—( ರಾಯರು ಹೋದ ಕಡೆಗೇ ನೋಡುತ್ತ ನಿಂತು. ಒಂದು ಉಸಿರುಗರೆದು ) ಆಗಲಿ ಇಲ್ಲೆಂದು ಹೇಳುವದಕ್ಕಿಂತ ತಿಂಗಳ ವರೆಗೂ ಎಡತಾಕಿಸಿ ಕಡೆಗೊಮ್ಮೆ ಇಲ್ಲೆಂದು ಹೇಳುವುದರಿಂದ ಏನು ಗಳಿಸುವರೋ ತಿಳಿಯದಾಗಿದೆ. ಇಲ್ಲೆಂಬ ಪ್ರಯೋಗವನ್ನು ಜಗದ ಜನರು ಎಷ್ಟು ಬಗೆಯಾಗಿ ಮಾಡುವರೆಂಬುವುದು ತಿಳಿಯಿತೇ? “ ಇಲ್ಲ ” ಇದಕ್ಕೆ ಒಂದು ಹೊಸ ನಿಘಂಟನ್ನು ಬರೆಯಬೇಕು. ಈ ಮನೆಯಲ್ಲಿಯೂ ಇಲ್ಲ. ( ನಗುತ್ತೆ. ) ನಡಿ ನರಸು. ಮುಂದಿನ ಮನೆಗೆ ಹೋಗೋಣ. ( ಕೈಯೊಳಗಿನ ಡಬ್ಬಿಯನ್ನು ಡುಬು ಡುಬು ಬಾರಿಸುತ್ತೆ ಹೋಗುವರು.)

೫

( ಬೆಳಗಾಂವಿ, ಮೈಸೂರು, ಧಾರವಾಡ, ಕಾರವಾರ, ವಿಜಾಪೂರರು ಬರುವರು. ಎಲ್ಲರ ಮುಖಗಳು ಸಪ್ಪೆಯಾಗಿರುವವು. ಬೆಳಗಾಂವಿಯು ಇಳಿ ಮೋರೆಯನ್ನು ಮೇಲೆ ಮಾಡಿರುವದಿಲ್ಲ ಮೇಲಿಂದ ಮೇಲೆ ಉಸಿರು ಗರೆಯುತ್ತಿರುವನು. )

**ಬೆಳಗಾಂವಿಃ**— ಹಾ.........ಕಂಡಿರಾ.........ಕಂಡಿರಾ.... .. ನಮ್ಮೂರ ನಡತೆಯನ್ನು ಕಂಡಿರಾ......... ಹುರುಪಿನಿಂದ ಕೆಲಸಕ್ಕಾಗಿ ಬಂದ ಜನರಿಗೆ ಸಿಕ್ಕ ಉತ್ತರವನ್ನು ಕೇಳಿದಿರಾ............ ಮಾಡುವವರಿಗೆ ಹುರುಪಿಲ್ಲ. ಮಾಡದವರಿಗೆ ಸಹನವಿಲ್ಲ...........ಹೀಗಾಗಿ ನನ್ನ ನಾಡು ಎಂದು ಮುಂದೆ ಬರಬೇಕು? ನನ್ನ ನಾಡಿನ ಉದ್ಧಾರವೆಂದು......... ಎಂದು ನನ್ನ ಉದ್ಧಾರವು......ನಿಮ್ಮ ಸಂಕನು ನಾನೆಂದು ಆಗುವೆನು .........ಈ ಜನ್ಮದಲ್ಲಿ......... ಈ ಜನ್ಮದಲ್ಲಿ ಈ ದರಿದ್ರನ ಹಣೆಯಲ್ಲಿ ಬರೆದಿದೆಯೆ !......ಇಲ್ಲ......ಇಲ್ಲ......ಅಂಥ ಬರೆಹವು, ಅಂಥ ವಾಕ್ಯವು, ಅಂಥ ಶಬ್ದವು, ಅಂಥ ಒಂದು ಅಕ್ಷರವು ಈ ಹತಭಾಗಿಯ ಹಣೆಯಲ್ಲಿಲ್ಲ .........ನಿಜವಾಗಿಯೂ ಇಲ್ಲ.........ಹಾಗಿದ್ದಮೇಲೆ ನನ್ನ ಉದ್ಧಾರ

ವೆಂದು. ಸಾಯುವ ವರೆಗೆ ನಾನು ಬಡವನು.........ಸಾಯುವ ವರೆಗೆ ನಾನು ಬಡವನು.........ಹೀಗೆಯೇ ಬಡವನು.........ಈ ಮಾಸಿದ ಅರಿವೆಗಳೇ ನನ್ನ ವೈ ಹೊದಿಕೆಗಳು....... ಈ ಸುಕ್ಕಿದ ಶರೀರವೇ ಜಗದ ಕೊನೆಯ ವರೆಗೆ..... ...ಹಾಯ ವಿಧಿಯೇ.........ಕೊನೆಗಾಲ ದಲ್ಲಿ.........ನನ್ನ ಪ್ರಾಲಬ್ಧದಲ್ಲಿ ಹೀಗೆ ಬರೆಯುವದಿದ್ದಿತೇ...... ಸಾವಿರ ಲೋಕಕ್ಕೆ ಅನ್ನದಾನ, ಧನದಾನ, ಭೂದಾನ ಮಾಡಿದ ಈ ಹಸ್ತ, ಈ ವಜ್ರಹಸ್ತವು ಅನ್ಯರ ಎಲೆಗೆ ಆಸೆ ಮಾಡಬೇಕಾಯಿತೆ. ..... .. ಎರಡನೆಯವರ ಎಂಜಲ ತುತ್ತಿಗೆ ಬಾಯ್ಬಿಟ್ಟು ಕೂಡ ಬೇಕಾಯಿತೇ! ದೇವಲೋಕದ ಸುಧೆಯನ್ನು ಸುರಿದ ಈ ದೇಹಕ್ಕೆ ಎಂಜಲ ಕೂಳನ್ನು ಕೊಡಬೇಕಾಯಿತೇ............ ಏನು ಮಾಡಲಿ............ ಎಲ್ಲಿ ಅಡಗಲಿ! ಸಹನಾತೀತವಾದ ಸಂಕಟವು ಎದೆಯು ಕುದಿಯ ಹತ್ತಿತು. ಪರಾನ್ನ ವನ್ನು ಬೇಡಿಕೊಂಡು ಬದುಕುವದಾಯಿತೆಂಬ ಭಾವನೆಯು ಕೂಡ ನನ್ನ ಎದೆಯನ್ನು ಕುಕ್ಕಿ ಕುಕ್ಕಿ ಕಡಿಯ ಹತ್ತಿತು............( ಹಣೆಯನ್ನು ಹೊಡೆದುಕೊಂಡು) ಅಯ್ಯೋ ನನ್ನ ದೈವವೇ .. . ...ಹಾ . . ..ಇಲ್ಲ. ಇಲ್ಲ. ಪರಾನ್ನವನ್ನು ಎಂದೂ ಸೇವಿಸೆನು. ಒಂದು ಆಗುಳು ಸಹ ಮೂಸ ಲಾರೆನು. ನನ್ನ ದೇಶದ ಹಾಳು ಮಣ್ಣನ್ನೇ ತಿನ್ನುವೆನು. ಉಪವಾಸ ಸಾಯುವೆನು. ವನವಾಸಕ್ಕೆ ಮುಗ್ಗಿಡುವೆನು. ಪರಾನ್ನದ ನರಕವು ಬೇಡ .. .. ದೇವೀ, ಹಿಂದಿನ ಕಾಲದಲ್ಲಿ ನಾನು ಮಾಡಿದ ಘನವಾದ ಕಾರ್ಯ ಗಳು ಮರೆಯುವಂಥವೇ! ..ನನ್ನ ಪ್ರಜೆಗಳಿಗೆ ಹುಲಿಯ ಮಕ್ಕಳನ್ನು ತ್ತಿದ್ದೆಯಲ್ಲವೇ!........ ಅವರೇ ಇಂದಿಗೆ ಇಲಿಯ ಮಕ್ಕಳಾದರೇ? ಎಲ್ಲರೂ ಇಲಿಗಳೇ!......... .....ಈ ಇಲಿಗಳಿಂದ ನಾನು ಏನು ಮಾಡಲಿ. ಈ ಇಲಿಗಳಿಂದ ನನ್ನ ಉದ್ಧಾರವಾಗುವದೆಂತು.........ಒಬ್ಬ ಗಂಡಸು.........ಒಬ್ಬ ಗಂಡಸಾದರು ಮುಂದೆ ಬಂದು ಸಾಯುವ ನನ್ನ ಶಿಸುಗಳನ್ನು ಬದುಕಿಸ ಬಾರದೇ!. .......ಯಾರು ಬದುಕಿಸಬೇಕು?

ಬುತ್ತಿಯನ್ನು ತಿನ್ನಿಸಿ ಬದುಕಿಸುವವರಾರು............ಇಂತಹ ಷಂಢರು ನನ್ನ ನಾಡಿನಲ್ಲಿ ಯಾಕೆ ತುಂಬಿರಬೇಕು! ...... ಜಗದ ಎಲ್ಲ ಕೊಳ ಕರು, ಕುಹಕರು, ಕುತ್ಸಿತರು, ದುರ್ಗುಣಿಗಳು, ದುರ್ಮಾರ್ಗಿಗಳು, ದುಷ್ಟರು ಸಂಸಾರ ಸಾಗರದಲ್ಲಿ ತೇಲಿ, ತೇಲಿ ಇಲ್ಲಿಗೆನೇ ಬಂದಿರಬೇಕೇ? ದೇವೀ, ಇಂಥ ಸಮಾಜವು, ಇಂತಹ ಜೊಳ್ಳು ಕಾಳುಗಳು ಹೇಗೆ ಬೈಲಾಗ ಬೇಕು!.........ಈ ನಿರ್ವೀರ್ಯ ನದಿಯು ಹೇಗೆ ಬತ್ತುವುದು..........

**ಮೈಸೂರುಃ**—ತಮ್ಮಾ ಶಾಂತನಾಗು..........

**ಎಲ್ಲರುಃ**—ಅಣ್ಣಾ ತಾಳಿಕೊಳ್ಳು. ತಾಳಿಕೊಳ್ಳು.........ನಿನ್ನ ಮಾತುಗಳಿಂದ ನಮ್ಮ ಕರುಳುಗಳು ಹರಿಯುಹತ್ತಿದವು. ಶಾಂತನಾಗು.

**ಬೆಳಗಾಂವಿಃ**—ಹೇಗೆ ಶಾಂತನಾಗಲಿ ... .. ಹೇಗೆ ಶಾಂತನಾಗಲಿ ಮಗಮಗಿಸುವ.........ಹೂವು ಮಾರಿದ ಸ್ಥಳದಲ್ಲಿ ಕಿಚಿಕಿಚಿ ಕೊಳೆತ ಹುಲ್ಲು ಮಾರಾಟ ನಡೆದಿದೆ.........ಹೇಗೆ ತಾಳಲಿ... . ಹೇಗೆ ತಾಳಲಿ. ... ..ಹೇಳು......ಹೇಳು.. ..ಅಮ್ಮಾ, ಭುವನೇಶ್ವರೀ, ಇಲ್ಲಿಯವರೆಗೆ ಮೊಲೆಯುಣಿಸಿ ಮುದ್ದಾಡಿದ, ಮುಂಡಾಡಿದ ಮುದ್ದು ಮಗುವನ್ನು ಮರೆತಿಯೇ!... .. ಅಪಮಾನದ ಕಿಡಿಗಳಿಂದ ಸುಟ್ಟು ಬೂದಿಯಾಗ ಲಿರುವ ಶರೀರವನ್ನು ಅಮೃತ ಹಸ್ತದಿಂದ ಮುಟ್ಟಿ, ತಟ್ಟಿ ವಜ್ರದೇಹಿ ಯಾಗಿ ಮಾಡುವದಿಲ್ಲವೇ! .. .ಸಂತಯಿಸುವದಿಲ್ಲವೇ!...... ಅಮ್ಮಾ ಅನಾಥ ರಕ್ಷಕಳೇ, ಪಾಪದ ಕೂಪದಲ್ಲಿ ಬಿದ್ದು ತೊಳಲುತ್ತಿದ್ದ ನನ್ನ ಶಿರದ ಮೇಲೆ ವರದ ಹಸ್ತವನ್ನಿಡುವದಿಲ್ಲವೇ!... .....ಕೈ ನೀಡಿ ಕರೆಯುವ ದಿಲ್ಲವೇ!....... ..ಕನ್ನಡ ದೇವೀ, ಕರೆದಾಗ್ಗೆ ಬರುವೆನೆಂದು ವಚನ ಕೊಟ್ಟಿರಲಿಲ್ಲವೇ! ... ..ನಿನ್ನನ್ನು ನಂಬದೆ ಮತ್ತಾರನ್ನು ನಂಬಲಿ? ಯಾರಿಗೆ ಶರಣು ಹೋಗಲಿ? ಯಾರ ಬೆನ್ನು ಕಟ್ಟಲಿ......ತಾಯೀ, ಅಮ್ಮಾ ......ನಿನ್ನ ಮಗುವನ್ನು ಹೀಗೆ ನೂಕಿ ಹೊರಗೆ ಹಾಕಬೇಡ. ಅಮ್ಮಾ ......ನೋಡು (ದೇಹಭಾನವನ್ನು ಮರೆತು ಕೈ ಮುಗಿಯುವನು ದಶದಿಕ್ಕುಗಳಿಗೆ.........ಎಲ್ಲರು ಅವನನ್ನು ಹಿಡಿಯುವರು. ಶಾಂತನಾಗು. ಶಾಂತನಾಗು ಅನ್ನುವರು. ಕನ್ನಡ ದೇವಿಯು ಪ್ರಕಟಳಾಗುವಳು. ಎಲ್ಲರು ನಮಸ್ಕರಿಸುವರು. ದೇವಿಯು ಮುಗುಳು ನಗೆಯಿಂದ)

**ದೇವಿ:**—ಮಕ್ಕಳೇ, ವಿಜಯವಾಗಲಿ. ಬಾಳಾ, ಬೆಳಗಾಂವಿ, ನನ್ನ ಮುದ್ದು ಮಗುವೇ, ಶಾಂತನಾಗು. ಶಾಂತನಾಗು...... ಹಿಂದೊಮ್ಮೆ ಮಾಡಿದ ಕರ್ಮಕ್ಕಾಗಿ ನೀನು ಇಷ್ಟು ದಿನ ಸಂಕಟಬಟ್ಟೆ. ಇನ್ನು ಮುಂದೆ ಅಷ್ಟಿಲ್ಲ. ಸಮಾಧಾನವನ್ನು ಹೊಂದು. ಈಗ ನಿನ್ನ ನಾಡಾದ ಬೆಳಗಾಂವಿಯಲ್ಲಿ ಬೆಳಗಾಗ ಹತ್ತಿದೆ. ಇನ್ನು ತುಸು ದಿನಗಳಲ್ಲಿ ಬೆಳಗಾಂವಿಯಲ್ಲಿ ನಾಡಗುಡಿಯು ಮೆರೆಯುವದೆಂದು ತಿಳಿ. (ಒಂದು ಕಡೆಗೆ ಬೆರಳುಮಾಡಿ) ಅಲ್ಲಿ ನೋಡಿರಿ ಮುಗಿಲ ಕಡೆಗೆ. ಅವರು, ಆ ದೇವ ದೂತರು, ನಿಮ್ಮ ಮುಂದಿನ ಕೀರ್ತಿಯನ್ನು ಮುಗಿಲ ಮೇಲೆ ಕೆತ್ತಹತ್ತಿರುವರು. ಆ ಮುಂದೆ ನೋಡಿರಿ. ಅದನ್ನು ಗಂಧರ್ವರು ಹಾಡಹತ್ತಿರುವರು..........(ಅದೃಶ್ಯಳಾಗುವಳು. ಕರ್ನಾಟಕಮಾತೆಗೆ ಜಯವಾಗಲೆನ್ನುವರು.)

— ಪರದೆ.



# ಪ್ರಾತರ್ವಿಧಿ.

(ಮುಂಜಾವಿನ ಸಮಯ. ಏಳು ಹೊಡೆದಿರಬೇಕು. ಅಡುಗೆಮನೆಯ ಒಂದು ಮುಂದಿನ ಕೋಣೆಯಲ್ಲಿ ತಿಳಿಬೆಳಕು, ತಿಳಿಗತ್ತಲೆ ತೀಡಿತಿಕ್ಕಿ ಕೂಡಿಸಿದಂತೆ ಆಗಿದೆ. ಕೋಣೆಯ ಗೋಡೆಗಳೆಲ್ಲ ಮಣ್ಣಿನವು. ಮೆತ್ತಿದ ಮಣ್ಣು ಉದುರಿ ಗೋಡೆಯಲ್ಲಿ ತೆಗ್ಗು ಬಿದ್ದಿವೆ. ಗೋಡೆಗೆ ಮೇಲ್ಗಡೆಗೆ ಎರಡೆರಡು ಗೂಟ. ಗೂಟಕ್ಕೆ ಒಂದೊಂದು ಗಂಟು. ಗಂಟಿನ ಮೇಲೆಯೂ ಅರವಿ ಅಂಚಡಿ. ಒಂದು ಮೂಲೆಯಲ್ಲಿ ಕೈಬಡಿಗೆ ( Walking stick ) ಇನ್ನೊಂದು ಮೂಲೆಯಲ್ಲಿ ಕರೇ ಬಣ್ಣದ ಒನಕೆ. ಅದರ ಎಡಕ್ಕೆ ಒಂದು ಬೀಸುವ ಕಲ್ಲು. ಅದರ ಗೂಟ ಬಳಿಯಲ್ಲಿ ಉರುಳಿದೆ. ಸುತ್ತುಮುತ್ತಲಿನ

ನೆಲವೆಲ್ಲ ಹಿಟ್ಟು ಹಿಟ್ಟು, ಹೊಟ್ಟು ಹೊಟ್ಟು. ಮಧ್ಯದಲ್ಲಿ ಒಂದು ದೊಡ್ಡ ಹಾಸಿಗೆ; ಗಾದಿ ಇದ್ದಂತಿಲ್ಲ. ಅದರ ಹತ್ತಿರ ಕೆಳಬದಿಗೆ ಇನ್ನೊಂದು ಸಣ್ಣ ಹಾಸಿಗೆ. ದೊಡ್ಡ ಹಾಸಿಗೆಯ ಮೇಲೆ ಒಂದು ಪುರಾಷಾಕೃತಿ, ಸ್ಪಷ್ಟವಿಲ್ಲ. ಇದ್ದರೆ ಯಜಮಾನ ರಾಮರಾಯರು. ಮುಸುಕಾಡುವರು. ರಾಮರಾಯರೇ ಅಹುದು. ಸಣ್ಣ ಹಾಸಿಗೆಯ ಮೇಲೆ ಒಂದು ಮಗು. ಒಂದೆರಡು ಅವಯವಗಳು ದುಪ್ಪಟಿಯ ಹೊರಗೆ ಬಂದಿವೆ. ಅಂಕಡೊಂಕು ಮಲಗಿದೆ. ಅಲ್ಲಿಯೆ ಸನಿಯಕ್ಕೆ ಒಂದು ಚಿಮಣಿ. ಅದರ ಕೆಳಗೆ ಎಣ್ಣೆ ಎಣ್ಣೆಯಾದ ಒಂದು ಸಣ್ಣ ಟೂಲು. (stool.) ಅದರ ಸುತ್ತು ಮುತ್ತು ನಾಲ್ಕೈದು ಕೆರೆದು ಒಗೆದ ಕಡ್ಡಿಗಳೂ, ಸುಟ್ಟುಬಿದ್ದ ಬೀಡಿಗಳೂ ಬಿದ್ದಿವೆ. ಅಸ್ತವ್ಯಸ್ತವಾದ ಹಾಸಿಗೆ ಹೊದ್ದಿಕೆಯಿಂದ ಕೋಣೆಯೆಲ್ಲ ಹಾಳು ಹಾಳು, ಹೊಲಸು ಹೊಲಸು. ಯಜಮಾನಿಯು-ಸೀತಮ್ಮ ಅಚೆ-ಇಚೆ, ಒಳಗೆ-ಹೊರಗೆ ಓಡಾಡುತ್ತಿರುವಳು. ಕೆದರಿದ ಕೂದಲು, ಅಸಡ್ಡೆಯಾದ ಮೊಗ, ಒಂದು ಕಡೆಗೆ ಬಹಳ ಏರಿದ, ಒಂದು ಕಡೆಗೆ ಬಹಳ ಇಳಿದ ಮಾಸಿ ಮುದ್ದಿ ಮುದ್ದಿಯಾದ ಸೆರಗಿಲ್ಲದ ಉಟ್ಟ ಸೀರೆ. ಎದೆಯು ಅರೆ ತೆರೆದಿದೆ. ಹುಡುಕಾಡಿ ಕಡೆಗೊಮ್ಮೆ ಹಾಸಿಗೆಯ ಕೆಳಗಿಟ್ಟ ಕಡ್ಡಿ ಪೆಟ್ಟಿಗೆಯನ್ನು ತೆಗೆದುಕೊಂಡು ಅಗಲಾಡಿಸುತ್ತ ಹೋಗುವಳು. ರಾಯರು ಹೆಚ್ಚು ಮುಸುಕಾಡುವರು. ಮುಖದ ಮೇಲಿನ ಹಚ್ಚಡ ತೆಗೆದು ಬೆಳಕು ನೋಡುವರು. ಬೆಳಗಾಗಿದೆಯೆಂದು ಭಾವಿಸಿ, ಎದ್ದು ಕುಳಿತು “ ಉತ್ತಿಷ್ಠೋತ್ತಿಷ್ಠ. ....” ಪದವನ್ನು ಬೇರಾಗದೊಳಗೆ ನುಡಿದು ಅಂಗೈ ತಿಕ್ಕಿ ಮುಖದ ಮೇಲೆ ಎಳೆದುಕೊಂಡು ಅಲ್ಲಿಯೇ ಮಾಡದೊಳಗಿದ್ದ ಒಂದು ಹಳೆಯ ಗಡಿಯಾರವನ್ನು ನೋಡುವರು. ಬಾಡಿದ ಮುಖಕ್ಕೆ ಬೆಳೆದ ಗಡ್ಡ. ನಿಂತ ಕೂದಲಿನ ಬೊಕ್ಕುತಲೆ. ಗುಂಡಿ ತೆಗೆದ ಮೈಯಲ್ಲಿ ಒಂದು ಅಂಗಿ. ರಾಸಿ ರಾಸಿ ಕೂದಲಿನ ಹರವಾದ ಎದೆ ಕಾಣುವದು. ಬಡಕಲಾದ ಉದ್ದ ಕಾಲನ್ನು ಎಳೆದುಕೊಂಡು ಮಡಚಿ ಕೂಡುವರು. ಈ ಅಕ್ಷರಗಳ ಮಸಿಯೇ ಅವರ ಮೈಬಣ್ಣ. ಆಕಳಿಸುತ್ತ.........)

**ರಾಮು:**—( ಅಡುಗೆಯ ಮನೆಯ ಕಡೆಗೆ ನೋಡಿ ) ಏನs, (ಎನುತ್ತ ಹತ್ತರವೇ ಇದ್ದ ತಂಬಿಗೆಯೊಳಗಿನ ನೀರು ತೆಗೆದುಕೊಂಡು, ಮುಖ ತೊಳೆದು, ಹೊದ್ದುಕೊಂಡ ಹಚ್ಚಡದಿಂದ ಒರಸಿ) ಎಲ್ಲಿದ್ದೀ....?(ಮಗುವಿನ ಕಡೆಗೆ ನೋಡಿ ) ಭೀಮಣ್ಣ... ಭೀಮೂ ರಾಜಾ...(ಎಂದು ಅವನ ಮೇಲೆ ಕೈ ಎಳೆಯುವರು.)

**ಸೀತಿ:**—(ಬಂದು) ಯಾಕs ಕರದಿರೇನು ?

**ರಾ:**—( ಅಚ್ಚರಿಯಿಂದ ಕಣ್ಣು ಜ್ಜಿಕೊಳ್ಳುತ್ತಾ ನೋಡಿ) ಹಣಿಗೆ... ಒಂದು ಬಟ್ಟು ಕುಂಕುಮ... ಹಾಳ ಹಸರ ಹಣಿ ಸುರಿತದ......

**ಸೀ:**— ಇದs ಈಗ ಎದ್ದೀನು. ಹಚ್ಚತೇನು.

**ರಾ:**—ಏನ ಹಚ್ಚತೀಯೋ...ಏನ ಇಲ್ಲೋ. .(ಒಂದಿಷ್ಟು ತಡೆದು, ರೋಸಿನಿಂದ) ಕನ್ನಡಿಯೊಳಗ ಮೊಗ ನೋಡಿಕೊಳ್ಳ ! . ಏನ ನಿನ್ನ ಕೂದಲು...ಏನ ನಿನ್ನ ಹಣಿ ಏನ ನಿನ್ನ ಮೂಗು ..ಏನ ನಿನ್ನ ತುಟಿ... ಏನ ನಿನ್ನ ಜೊಲ್ಲು...ಏನ ನಿನ್ನ ಮುಸುಡಿ... ಮೋತೀಮ್ಯಾಲಿನ ಕಲೆ ಹೋಗಿಲ್ಲಲ. ಮದಿವ್ಯಾವರ ಮನೀಗೆ ಸುಣ್ಣಾ ಇಳಿಬಿಟ್ಟಾಂಗ ಆಗೇದ. ಎಳೇ ಮಕ್ಕಳು ನಿನ್ನ ಮೋತೀ ನೋಡಿದರ ಅಂಜ ಎದೀ ವಡಕೊಂಡ ಜೀವಾ ಬಿಟ್ಟಾವ ! ಮೋತೀ ನೆಟ್ಟಗ ತೊಳಿಯ . . ಕೂದಲಾ ನೋಡ ತಂತೀ ಸಿಂಬಿ ಬಿಚ್ಚಿದಾಂಗ ಏನ ನಿಂತಾವ ಹುರ್‌ರ್‌ರ್ ಅಂತ ! ! ( ಸೀತೆಯು ಏನೋ ಬಾಯಲ್ಲಿ ಅನ್ನುತ್ತ ಬೆರಳಿನಿಂದ ತೀಡಹತ್ತುವಳು; ಸಿಟ್ಟಿನಿಂದ) ಏನ ತೀಡತೀಯ ಕುಂಬಾರ ಗಡಗೀ ತೀಡಿದಾಂಗ ! ಹಣಿಗೀಲಿ ಹಿಕ್ಕ ಹಣಿಗೀಲಿ. ಆ ಮೋತೀಮೇಲಿನ ಸುಣ್ಣದ ಹರಿ ತೊಳಿಯ, ಮುದಕಿಗೆ ಮೀಸಿ ಬಂದಾಂಗ ಆಗ್ಯಾವ. (ಸಿಟ್ಟಿನಿಂದ ವಟಗುಟ್ಟುತ್ತ ಹೋಗುವಳು. ಕೆಲಹೊತ್ತು ಅವಳ ಕಡೆಗೆ ನೋಡಿ ಮುಖ ಹೊರಳಿಸಿ ಭೀಮನನ್ನು ನಿರೀಕ್ಷಿಸುತ್ತ) ಭೀಮಣ್ಣಾ .. ಭೀಮಪ್ಪ . ಭೀಮಾಜಿ . ಭೀಮುಸಾಹೇಬ .. ಭೀಮೂ... ಭೀಮಾ... ( ಗಟ್ಟಿಯಾಗಿ )ಭೀಮ್ಯಾ . ಏ ಕೋಣಾ... ಏ ಕತ್ತೆ...ಮಗನಾ .. ಎಳು ( ಎಂದು ಅವನ ಹಚ್ಚಡ ಎಳೆಯುವನು. ಭೀಮನು ತುಸು ಮಿಸುಕುವನು. ) ಆತೇನs ( ಅಡುಗೆಯ ಮನೆಯ ಕಡೆಗೆ ಮುಖಮಾಡಿ ) ಆತೇನs ( ಎನಲು ಸೀತಾಬಾಯಿಯು ಸಿಡಿಮಿಡಿಗೊಂಡು......)

ಸೀ:—(ಬಂದು)ಯಾಕಃ ಮತ್ತ್ಯೇನ ಬಯ್ಯುದು ಉಳದದ !

ರಾ:—(ನಗುವಂತೆ) ನೋಡಃ...ಎಷ್ಟ ಚೆಂದಕಾಣಸತಿ ? ... ಈಗ ಹೆಂಗಸರಂತೆ ಕಾಣಹತ್ತೀಡಿ ನೋಡ...?

ಸೀ:—ಹೆಂಗಸೋ, ಗಂಡಸೋ ತಕ್ಕೊಂಡು ಏನು ಮಾಡೂದು...

ರಾ:—( ಉಗುಳು ನುಂಗಿ ) ಬಿಡು.

ಸೀ:—ಯಾಕ ಕರಿದಿರಿ ?

ರಾ:— ಆ..... ಚಾ...ಮಾಡಿದೇನು ?

ಸೀ:— ಏನ ಮಾಡಲಿ ನನ್ನ ತಲಿ...ಸಕ್ಕರಿಲ್ಲ.

ರಾ:—ಸಕ್ಕರಿಲ್ಲ !...ಮನ್ನೆ ತಂದಿದ್ದಲ ಸೇರ ಸಕ್ಕರಿ.......

ಸೀ:—ಮನ್ನೆ ಯೆಲ್ಲೀದು ? ತಂದ ಇಂದಿಗೆ ಹತ್ತು ದಿನಾದು !

ರಾ:—( ಆಕಳಿಸುತ್ತೆ ) ಹತ್ತ ..ದಿವಸ ಆದೂನ......

ಸೀ:—ಹೌದು ... ಇಂಧಿಗೆ ಹನ್ನೊಂದು.....

ರಾ:—ನಾಳೆ ತರತೇನು ಇಂದಸಾಗಿಸ......

ಸೀ:—ಏನ ಸಾಗಿಸಬೇಕು ? ನನ್ನ ಹೆಣಾ ಸಾಗಿಸಿದರ ಸರಿ.

ರಾ:—ಹೆಣಾ ಯಾಕ ಸಾಗಸತೀಯ ?

ಸೀ:—( ವಟವಟ ಅನ್ನುವಳು. )

ರಾ:—(ಸಮಸ್ಯೆಯನ್ನು ಗೆದ್ದವರಂತೆ. ) ಬೆಲ್ಲಾ ಹಾಕಿ ಮಾಡ ... ಇಷ್ಟ ತಿಳೀಬಾರದೇನು......... ! ( ಸೀತಾಬಾಯಿಯು ಹೋಗುವಳು. ) ಬೇಗ ತಾ. ( ಭೀಮೂನ ಕಡೆಗೆ ) ಭೀಮಯ್ಯಾ ಏಳು. ಏಳು ಮಗನ... ( ಹುಡುಗರಂತೆ ) ಭೀಮಣ್ಣನುರಿ, ಸಕ್ಕರಿ ತುಪ್ಪ ಸುರಿ, ಬುಂದೆ ಲಾಡು ಕರಿ, ನನ್ನೂಟಕ್ಕರಿ. ( ಎಂದು ಉರುಳಾಡಿಸುವನು. ಏಳುವದಿಲ್ಲ. ) ಏಳು. ಲಗು ಏಳು. ಚಾ ಆಗೇದ ಏಳಪಾ ..ಭೀಮ್ಯಾ ಏಳೋ ಕೋಣಾ... ( ಸೀತೆಯು ಒಂದು ತಂಬಿಗೆ, ಎರಡು ಧಾಲಿ ತಂದು ರಾಯರ ಮುಂದೆ ಇಡುವಳು. )

ಸೀ:— ( ಮಗನ ಬಳಿಗೆ ಹೋಗಿ ) ಭೀಮ್ಯಾ ಏಳು. ( ಎಂದು ಜಗ್ಗುವಳು. )

**ಭೀಮು:—**(ಮುಸುಕಿನೊಳಗಿಂದ) ಊ... ಹೂ... ಹೋಗs.

**ರಾ:—**ಚಾ ಆಗೇದ ಏಳಪಾ ( ಎಂದು ತಂಬಿಗೆಯನ್ನು ಮುಂದಕ್ಕೆ ಎಳೆದುಕೊಳ್ಳುವನು. )

**ಭೀ:—**ಒಲ್ಲೋಗೊ......

**ಸೀ:—**(ರಕ್ಕಸತನದಿಂದ) ಅದನ್ನಷ್ಟ ಬಕ್ಕರಸಿ ಮತ್ತೆ ಬೀಳೀಳೋ. (ಎಂದು ಜಗ್ಗುವಳು. ಮತ್ತೆ ಅವನು ಮುಸುಕಿಕ್ಕಿ ಮಲಗುವನು. )

**ರಾ:—**ಏಳೋ ಬೋಳ್ಯಾ .....

**ಸೀ:—**ರಾತ್ರಿ ಎಲ್ಲ ತ್ರಾಸು ಕೊಡೋದು, ಹಗಲು ಹೊತ್ತೇರುವರೆಗೆ ಮಲಗೋದು...ಏಳೋ... ಎಷ್ಟು ಹೊತ್ತಾಗೇದ.

**ರಾ:—**( ಸಿಟ್ಟಿನಿಂದ ) ಏಳೋ ಕತ್ತೆ. ಅವಾ ಹಾಂಗ ಏಳೋದುಲ್ಲ. ಅವನ ಕಿವ್ಯಾಗ ಸೀರ ಹಾಕು, ಅಂದರ ಏಳತಾನು. ( ಸೀತೆಯು ಎದ್ದು ಕೂಡಿಸುವಳು. ಭೀಮನು ಕಣ್ಣು ತೆರೆತೆರೆದು ಮುಚ್ಚುವನು. ಇನ್ನೂ ಜೋಲೀ ಹೊಡೆಯುವನು. ಸೀತೆಯು ನೆಟ್ಟಗೆ ಕೂಡಿಸುವಳು.— ಭೀಮನು ೬-೭ ವರುಷದವನಿರಬೇಕು. ಹಳಯ ಮಣ್ಣಿನಂತಹ ಬಣ್ಣದ ದುಂಡಗಿನ ಮೈ. ಬಟ್ಟೆಬರೆಯಿಲ್ಲ ಬೆತ್ತಲೆ. ಹಚ್ಚಡ ಮೈ ಮುಚ್ಚಿದೆ. ನಡುನಡುವೆ ತೂಕಡಿಸುವನು. ಸೀತೆಯು ಕಿವಿ ಹಿಂಡುವಳು. ಚಿಟ್ಟನೆ ಚೀರುವನು. )

**ಸೀ —** ಸುಟ್ಟುಬರಲಿ ಮುದಿಗೂಗಿ ಆತು. ಇನ್ನೂ ಹಟಾ ಬಿಟ್ಟಿಲ್ಲ. ( ಭೀಮನು ನೀಲಾಂಬರಿ ರಾಗವನ್ನು ಮಾಡಹತ್ತುವನು. ) ಸುಮ್ಮನಿರು; ಸುಮ್ಮನಿರು. ಇಲ್ಲದಿದ್ದರೆ ನಿನ್ನ ಹಾಕತೇನು ನೋಡು ಸುಮ್ಮ. ನಿನಗೇನೋ... .

**ರಾ:—**( ಮೈಮೇಲೆ ಕೈಯಾಡಿಸುತ್ತೆ ) ಇರಲಿ ಬಿಡ, ಸುಮ್ಮಾಗು ವನು. ಬಾಯಿಲ್ಲಿ ಭೀಮಣ್ಣಾ ( ಎಂದು ಬಳಿಯಲ್ಲಿ ಎಳೆದುಕೊಂಡು ಒಂದು ಥಾಲಿಯಲ್ಲಿ ಚಾ ಸುರುವಿ ) ಹಿಡಿ. ಚಾ ಹಿಡಿ. ಚಾ ಕುಡಿಹಿಡಿ. ( ಎಂದು ಅವನ ಮುಂದಿಡುವನು. ಇನ್ನೊಂದು ಥಾಲಿಗೆ ತಾನು ಸುರುವಿ ಕೊಂಡು ಒಂದು ಗುಟುಕು ಕುಡಿಯುವನು. ನಾಲಿಗೆಯು ಸುಡುವುದು. ಆವಸರದಿಂದ ಥಾಲಿಯನ್ನು ಕೆಳಗಿಟ್ಟು ) ಏನ ಚಾ ಇದೂ......?

ಸೀಃ—ಯಾಕ? ಏನಾಗೇದ ಅದಕ್ಕ? ಕುಡದ ನೋಡಿರಿ! ಹತ್ತು ವರುಷದ ಹಳೀ ಬ್ಯಾನಿ ಹಾರಿ ಹೋಗತಾವು. ಅಷ್ಟಮಾಂಶ ಕಾಡೇ ಮಾಡಿದಾಂಗ ಮಾಡೇನು!!

ರಾಃ— ಅಷ್ಟಮಾಂಶೋ, ಸಪ್ತಮಾಂಶೊ! (ಮತ್ತೊಂದು ಗುಟುಕು ಕುಡಿದು) ಇದನ್ನ ಕುಡದರ ಬ್ಯಾನೇನ ಹೋದಾವ, ಇಲ್ಲದ ಬ್ಯಾನಿ ಮೈಮ್ಯಾಲ ಏರಿಬರತಾವು. (ಇನ್ನೊಂದು ಗುಟುಕು ಕುಡಿದು ಸೂಕ್ಷ್ಮವಾಗಿ ನಿರಿಕಿಸಿ) ಏನ ಇದರ ಬಣ್ಣ...ಏನಿದರ ರುಚಿ.. ಏನಿದರ ವಾಸನೆ... ತ್ರಿವೇಣಿಸಂಗಮ ಆಗೇದಲ. (ಮಗುದೊಂದು ಗುಟುಕು ಕುಡಿದು ಮೂಗುಮೇಲಿರಿಸಿ ಕೋರ್ಟಿನೊಳಗಿನ ವಕೀಲನಂತೆ) ಆ ಕರೀ ಚಂದ್ರಕಾಳೀ ಸೀರಿ, ಹೂಗೀ ಮ್ಯಾಲ ಹತ್ತ ವರಷ ಕಟ್ಟಿ, ಹಂಚಿನ್ನಿರಾಗ ಇಲ್ಲಣಾ ಕಲಿಸಿ ಕತ್ತಲ್ಯಾಗ ಕಾಗೀಪುಚ್ಛದ ಉರಿ ಮ್ಯಾಲ ಕಬ್ಬಿಣದ ಕಡಾವಿಗ್ಯಾಗ ಇಟ್ಟ ಕುದಿಸಿ ಹಿಂಡಿ ತಂದಿದಿ ಏನs...(ಪುನಃ ಒಂದು ಗುಟುಕು ಕುಡಿದು) ಇದರ ಮ್ಯಾಲ ತೇಲೂದೇನ? ಯಾವ ಪ್ರಾಣೀ ಇದು? ಮನ್ಯಾಗಿನ ಚಿಕ್ಕಾಡು, ತಗಣಿ, ಗುಂಗಾಡು, ಹೇನು, ಕೂರಿ, ಇರವಿ, ಕೀಡಿ, ಇಲಿ, ಕಪ್ಪಿ, ಜೊಂಡಗಾ, ಹೆಗ್ಗಣಾ ಒಂದಾರೆ ಬಿಟ್ಟೇದಿ ಇಲ್ಲೋ?..... ...ಚಾಪುಡಿ ಹಾಕೂ ಬದಲು ಇರವೀ ಕಾಲ ಹಾಕಿ ಕುದಿಸೀದೀ ಏನ?

ಸೀಃ—ಬೆಲ್ಲಕ್ಕ ಇರವಿ ಹತ್ಯಾವೇನೋ? ಒಂದ ಕಾಲು ಬಂದಿರ ಬೇಕು. ಎಷ್ಟ ಮಾತಾಡತೀರಿ?

ರಾಃ—ಬಣ್ಣಾ ನೋಡ ಬಣ್ಣಾ. ಕರಿಕರಿ ಅಮಾಸಿ ಕರಗಿ ನೀರಾಗಿ ಕಲ್ಲಪರಟ್ಯಾಗ ನಿಂತಾಂಗ ಎಷ್ಟ ಕರಿಯು?

ಸೀಃ—ಬೆಲ್ಲಾ ಕರೀ ಅದ. ಅದಕ್ಕ ನಾನೇನ ಮಾಡಲಿ. ಒಂದಿಷ್ಟ ಕರೀ ಆಗಿರಬೇಕು. ಅದಕ್ಕs ಹಾಲು ಹೆಚ್ಚ ಹಾಕೇನು ನೋಡಿರಿ.

ರಾಃ—(ಪುನಃ ಒಂದು ಗುಟುಕು ಕುಡಿದು) ಆಮುಟಿ. ಆಮುಟಿ ಆಗೇದಲ! ಉಪ್ಪಿಷ್ಟು ಉಪ್ಪುಕಾರ ಹಾಕೇದಿ ಏನ?

**ಸೀ:**—ಉಪ್ಪು ಎಲ್ಲೀದ ಹಾಕಲಿ! ಮನ್ಯಾಗಿನ ಉಪ್ಪ ತೀರಿ ಮೂರದಿನಾ ಆದುವು......ಮೊನ್ನೆ ನೀವಃ ಅಲ್ಲಿಲ್ಲ......ಕರೀ ಬೆಲ್ಲ ಒಂದಿಷ್ಟು ಉಪ್ಪುಪ್ಪು ಅದ ಅಂತ. ಅದಕ್ಕ ಒಂದಿಷ್ಟ ಉಪ್ಪ ಹತ್ತಿರಬೇಕು?

**ರಾ:**—ಸಮುದ್ರದ ನೀರಾಗ ಚಾ ಮಾಡಿದಾಂಗ ಆಗೇದಲ...... ಏನ ಚಾ... ಏನ ನೀನು ... ಎಲ್ಲಾರನ್ನ. (ಇನ್ನೊಂದಿಷ್ಟ ಕುಡಿದು) ಮ್ಯಾಲ ಎಣ್ಣಿಯಾಕ? ಮೋತಿ ಮ್ಯಾಲ ಬಸಿಯೂ ಎಣ್ಣೆ ಬಳತಗದ ಇದರಾಗ ಕೂಡಿಸೀದಿ ಏನ?

**ಸೀ:**— ಹೆಸರಿಡದ ಒಂದಿನಾರೆ, ಒಂದಿನಾರೆ!! ಚಾ ಆಗಲಿ, ಊಟಾ ಆಗಲಿ ಹೆಸರಿಡದ ಒಂದಿನಾರೆ ಮಾಡೋದು? ಯಾವದಕ್ಕೂ ಹೆಸರಿಡೋದೇ... . ಉಪ್ಪಾರೆ ಅನ್ನೋದು. ಹುಳಿಯಾರೆ ಅನ್ನೋದು.... ಕಡೆಗೆ ಇಲ್ಲದ್ದೊಂದು ಬ್ಯಾಡ್ಡ ಅನ್ನೋದು. ನಿಮ್ಮವ್ವ ನಿಮ್ಮನ್ನ ಎಂಥಾ ಮೂರ್ತದ ಮ್ಯಾಲ ಹಡದಾಳೋ ಯಾರ ಬಲ್ಲರು.

**ರಾ:**—(ಕಿಡಿ ಕಿಡಿಯಾಗಿ) ನನ್ನ ನಮ್ಮವ್ವ ಚಲೋ ಮೂರ್ತದ ಮ್ಯಾಲ ಹಡದಾಳು. ನಿನ್ನ ಮಾತ್ರ ನಿನ್ಮವ್ವ ಆದಿತ್ಯವಾರ ಅಮಾಸಿ ಖಗ್ರಾಸ ಸೂರ್ಯಗ್ರಹಣದ ಮೂಲಾ ನಕ್ಷತ್ರ ಮ್ಯಾಲ ಹಡದ ನನಗ ಮೂಲಮಾಡಿಟ್ಟಳು. (ಚಾದ ಕಡೆಗೆ ನೋಡಿ) ಈ ಬರೆ ಚಾ ನನ್ನ ಗಂಟಲದಾಗ ಇಳಿಯೋದಿಲ್ಲ. ಅದಕ್ಕ ಏನಾರೆ ಜೊಡೀ ತಂದಕೊಡು?

**ಸೀ:**—ಏನ ತರಲಿ ಮಣ್ಣು?

**ರಾ:**—ಮಣ್ಯಾಕಃ . . ?

**ಸೀ:**—(ಅಷ್ಟೇ ಗಡುತರವಾಗಿ) ಅವಲಕ್ಕಿ ತೀರಿ ಆರ ವರಷಾದು?

**ರಾ:**—(ಹಾಗೆಯೋ ಒದರಿ) ಕೇಳಿದ್ದು ಯಾವದದ ಅಂತೀಯು ಮನ್ಯಾಗ?

**ಸೀ:**—ಇದ್ದರ ಅದ ಅಂದೀತು. ಇಲ್ಲದಿದ್ದರ ಎಲ್ಲೀದ ತರಬೇಕು?

**ರಾ:**— ನಿನ್ನೆ ಶನಿವಾರ. ಥಾಲೀಪೆಟ್ಟು ಮಾಡಿಷ್ಟಿ. ಅದ ಏನ ನೋಡ?

ಸೀಃ—ಒಂದೆರಡು ಚೂರ ಇದ್ದಾಂಗ ಇದ್ದು. ಮತ್ತ ಭೀಮ್ಯಾ ನೀ ಏನಾರೆ ತಿಂದೀದಿ ಏನೋ? (ಅವನು ಸಿಟ್ಟಾಗಿ ಕುಳಿತಿರುವನು.) ನೋಡರಿ. ನೋಡರಿ. ಅವನ ಅಭಿಮಾನ ನೋಡರಿ. ಅಪ್ಪನ ಅಭಿಮಾನ ಅಂದರ ಬ್ಯಾಗೀ ಗುಡ್ಡದಷ್ಟು?

ರಾಃ—ಹೌದು. (ನಗುತ್ತ) ನಮ್ಮ ರಾಜಾನ್ನ ಯಾಕ ಬಯ್ಯ ಬೇಕ! (ಅವನ ಬೆನ್ನ ಮೇಲೆ ಕೈಯಾಡಿಸುವನು.) ಇಲ್ಲ ಬಿಡ ಭೀಮಣ್ಣ. ಸುಮ್ಮನಾಗು ಆಕಿನ್ನ ಹೊಡೋಣ. ಸುಮ್ಮನಿರು ಚಾಕುಡಿ.

ಭೀಃ—(ಹಲ್ಲು ಕಿರಿದು) ಹಂಗಾರ ಹೊಡಿ ಅಪ್ಪ. ಅವ್ವನ್ನ ಹೊಡಿ.

ರಾ:—ಹೊಡೀಲಾ? (ಎಂದು ತನ್ನ ಕೈ ಕೈ—ಆಕೆಯ ಕಡೆಗೆ ಮಾಡಿ ಹೊಡೆದು) ಹೊಡೆದೆ ಸುಮ್ಮನಿರು.

ಸೀಃ—(ಸುಳ್ಳು ಸಿಟ್ಟಿನಿಂದ ಅಳುವ ಮುಖಮಾಡಿ) ಲುಚ್ಚಾ, ನನ್ನ ಹೊಡಿಸಿದಿ. ನನ್ನ ಹೊಡಿಸಿದಿ ಇಂದ ಮಧ್ಯಾನ್ಹಕ ಊಟಾ ಕಾಣು ......ಊಟಾ ಇಂದ ನಿನಗ ಹಾಕತೇನು ಕಾಣೂ ಅಂದೆ......ಊರ ಸೆಗಣೀ ತಿನ್ನ ಸೆಗಣೀ.

ಭೀಃ—(ಅಪ್ಪನ ತೊಡೆ ಹಿಡಿದು) ಅಪ್ಪಾ ನೋಡು. ಅವ್ವ ಒಯಿತಾಳು..... ?

ರಾ:—(ಭೀಮನ ಬೆನ್ನಮೇಲೆ ಕೈಯಾಡಿಸಿ) ಹೆದರ ಬ್ಯಾಡಾ- ನಾ ಇರುವ ವರೆಗೆ ಯಾಕ ಹೆದರತಿ. ಹಾಕದಿದ್ದರ ಬಿಡು ಅನ್ನು ಅನ್ನು. (ಸೀತೆಯು ಕಣ್ಣು ಕಿಸಿಯುವಳು. ಭೀಮನು ಹೆದರುವನು.) ಅನ್ನೋ ಅನ್ನು. (ಭೀಮನು ಹಿಂಜರಿಯುವನು.) ಅನ್ನು (ಎಂದು ಬಹಳ ಆಗ್ರಹ ಮಾಡಲು ಭೀಮನು ರಾಮರಾಯನ ತೀರ ಹತ್ತಿರ ಹೋಗಿ—)

ಭೀಃ—ಹಾಕದಿದ್ದರ ಬಿಡು. (ಎಂದು ಅವನನ್ನು ಹಿಡಿದುಕೊಳ್ಳು ವನು. ರಾಮರಾಯನು ನಗಹತ್ತುವನು.)

ಸೀಃ—ಹಾಂಗಾರ ತಿನ್ನು ಸೆಗಣೀ [ಎನ್ನುತ್ತ ಸುಳ್ಳು ಸಿಟ್ಟಿನಿಂದ ಹೋಗುವಳು. ರಾಮರಾಯನು ಹಾಗೆ 'ಹ್ಹ ಹ್ಹ ಹ್ಹ' ಎಂದು ನಗುತ್ತಿ

ರುವನು. ಅವನ ಜೊತೆಗೆ ಭೀಮನೂ ಹಲ್ಲು ಕಿರಿಯುವನು. ರಾಮರಾಯನು ಅವನ ಬೆನ್ನು ತಟ್ಟಿ, ಥಾಲಿಗೆ ಒಂದಿಷ್ಟು ಚಾ ಸುರುವಿ. ]

ರಾಃ—ಕುಡಿ. ಕುಡಿ. [ ಎನ್ನುವನು. ಸೀತೆಯು ಥಾಲೀ ಪೆಟ್ಟಿನ ಒಂದೆರಡು ಚೂರುಗಳನ್ನು ತಂದು, ಕಾಗದ ಹಾಸಿ ಅದರ ಮೇಲಿಡುವಳು. ರಾಮರಾಯನು ಒಂದು ಚೂರು ಕೈಗೆ ತೆಗೆದುಕೊಂಡು ತಿರುವಿ ಮುರುವಿ ನೋಡಿ ] ಇದೇನ ಥಾಲೀಪೆಟ್ಟ! ಬೇಲಿಗೆ ಹಚ್ಚ್ಯಾ ಗಿಡ-ಬಳ್ಳಿ ಇದರ ಮ್ಯಾಲ ಬೆಳದಾವಲ ?

ಸೀಃ—[ ತುಡುಗು ಹಿಡಿದವರಂತೆ ] ಹೆಸರಿಟ್ಟಿರಾ, ಹೆಸರಿಟ್ಟಿರಾ ?

ರಾಃ—ನೋಡ. ನೋಡಿಲ್ಲಿ. ಕಣ್ಣಾಗ ಏನ ಹೂ ಬಿದ್ದವೇನ ನೋಡ?

ಸೀ:—[ ದಿಟ್ಟಿಸಿ ನೋಡಿ ] ಗಿಡಾ ಎಲ್ಲೀದು! ಹಿಟ್ಟು ಕಾಣೋದುಲ್ಲ. [ ಇಸಕೊಂಡು ಒರಿಸುವಳು. ]

ರಾಃ—[ ಭೀಮನು ಒಂದು ಚೂರು ತೆಗೆದುಕೊಳ್ಳಲು ] ಒರಿಸಿ ತಿನ್ನು. ಭೀಮಾ, ಅದರ ಮ್ಯಾಲ ಬೂಸರ ಬಂದದ. [ ಕೈಗೆ ತೆಗೆದುಕೊಂಡು ಒಂದಿಷ್ಟು ಕಡಿದು ] ಇಷ್ಟ್ಯಾಕ ಮೆತ್ತಗ ? ಬಿಸಿನೀರಾಗ ನೆನಿ ಇಟ್ಟಿದ್ದಿ ಏನ ?

ಸೀಃ—ಹೆಸರಿಡದ ಉಂಡದ್ದು, ತಿಂದದ್ದು. ಇಲ್ಲ ಇಲ್ಲ. ಹೆಸರಿಡದ ತಿಂದರ ರುಚಿ ಹತ್ತುವಹಾಂಗ ಇಲ್ಲ ಕಾಣತದ ?

ರಾಃ—ಹಿಂಗ ನೀ ಹೊಲಸ ಮಾಡಿದ ಮ್ಯಾಲ ಇಡದ ಹ್ಯಾಂಗ, ನೋಡಿಲ್ಲಿ ?

ಸೀಃ—[ ಬೇಜಾರದಿಂದ ] ಎಲ್ಲಾ ನೋಡಿತು ತಿನ್ನರಿ. [ ಒದರುವಳು. ]

ರಾಃ—ಅಕ್ರೋಶ. ಎಲ್ಲಾದಕ್ಕೂ ಅಕ್ರೋಶ ಮಾಡೋದು. ನೋನಸೆನ್ಸ.

ಸೀ:—[ ತಡೆಯುವವರಂತೆ ] ಯಾಕ ಬಯ್ಯತೀರಿ ಸುಳ್ಳೀ !

ರಾ:—[ಮೊದಲಿನ ಬಯಿಗುಳದ ಆವೇಶದಿಂದಲೇ] ಅರೇಬಿಯನ್ ಸಾಯಿಟ್ಸ......[ಗಟ್ಟಿಸಿ]...ಡಿ...ಓ...ಜಿ...

ಸೀ:—ಸುಳ್ಳಸುಳ್ಳೀ ಆ ಕೆಟ್ಟ ಕೆಟ್ಟ ಬೈಗುಳಾ ಬಯ್ಯಬೇಡರಿ.

ರಾ:— ಬಯ್ಯತೇನು. ಸಾವಿರ ಬಯ್ಯತೇನು...... ..ಸಂಜಾಬ ಮೇಲ...ಯುನಿಯನ್ ಕ್ಲಬ್...ಬಿಸ್ಮತ್...

ಸೀ:— [ಅಳುಮೋರೆಯಿಂದ] ಕೆಟ್ಟ ಕೆಟ್ಟ ಬೈಗಳಾ ಮುಂಜಾನೆ ಕ್ಷಣ ಬಯ್ಯೋದು. ಏನೂ ತಪ್ಪಿಲ್ಲದ ಬಯ್ಯೋದು... ..

ರಾ:— [ಅದೇ ದನೆಯಲ್ಲಿ] ಕ್ವೆಟ್ಟಾ ಭೂಕಂಪ ..ಹಾಲಂಡ .. .. ಫಾಸಿಝಂ...

ಸೀ:— [ತೀರ ಅಳುಮೋರೆಯಿಂದ] ಬಯ್ಯರಿ ಬಯ್ಯರಿ. .

ರಾ:— ಬಾಂಬೇ ಕೌನ್ಸಿಲ್ಲ...ದಿಲ್ಲೀ ಕಾಂಗ್ರೇಸ್ಸ...

ಸೀ:— [ಕಣ್ಣಾ ತಿಕ್ಕಿಕೊಂಡು ಕೆಲಹೊತ್ತಿನ ಮೇಲೆ] ಸಾಕಾಯಿತ ..ಬೈಯ್ಯೋದ ಸಾಕಾಯಿತ ?

ರಾ:— [ಬಿರುಸಾಗಿ] ಇನ್ನೂ ಬಯ್ಯುವೆನು....

ಸೀ:— [ತಾಳುವವರಂತೆ] ನೆಟ್ಟಗ ಕನ್ನಡದಾಗ ಬಯ್ಯರಿ. ನನಗ ತಿಳಿದಾರೆ ತಿಳಿದಾವು. ಅದನ್ನ ಬಿಟ್ಟ ಸುಡಗಾಡ ಸುಟ್ಟ ಭಾಸೇದಾಗ ಬಯ್ಯೋದು. ಅದರ ಅರ್ಥ ತಮಗಾರೆ ಎಲ್ಲಿ ಗೊತ್ತದನೋ ? ಬರೇ ಒಬ್ಬರು ಮಾತಾಡು ಮುಂದೆ ಸಿ ಎ ಟಿ ಪ್ಯಾಟ ಅಂದರ ಒಂಟೀ ತಲಿ, ಆರೋಡಿ ರಾಟ ಅಂದರ ನಾಯಿ ಡೊಂಕ ಬಾಲ, ಎಮ್ಮ್ಯಟಿ ಮೋಟ ಅಂದರ ಸುಡಗಾಡಸಿದ್ದ ಅಂತ ಅಂದದ್ದನ್ನ ಕೇಳಿದರ ಬಂದಾಂಗ ಆಗಲಿಲ್ಲ! ಇಂಗ್ರೆಜಿ ಬಾಳ ದೊಡ್ಡ ಭಾಸೆ. ಅಷ್ಟ ನನಗೂ ಬರತಾವು...

ರಾ:— [ಕಿಡಿಕಿಡಿಯಾಗಿ] ನನಗ ಬುದ್ಧಿ ಮಾತ ಹೇಳತೀ ಏನ ? ಇಟಲಿ-ಅಬಿಸೀನಿಯಾ, ಗೋಲಗುಮುಟ [ ಏಂಬು ಬಯಿದು ಬಹಳ

ಹೊತ್ತು ನಿಲ್ಲುವನು. ಸೀತೆಯು ಮೆಲ್ಲಗೆ ಒಳಗೆ ಹೋಗುವಳು. ರಾಮ ರಾಯನು ಸಿಟ್ಟು ಇಳಿಸಿಕೊಂಡು ಕೈಯೊಳಗಿದ್ದ ಥಾಲಿಯ ಕಡೆಗೆ ನೋಡಿ ಒಂದೆರಡು ಗುಟುಕು ಕುಡಿಯುವನು. ಬಾಯಲ್ಲಿ ಒಂದು ಕೂದಲು ಬರುವುದು. ಬೆರಳಿನಿಂದ ಹೊರತೆಗೆದು] ಥೂ...ಥೂ...ಏನ ಹೊಲಸು. ನೋಡ ...ನೋಡಿಲ್ಲಿ [ಎನಲು ಸೀತೆಯು ಒಂದಿಷ್ಟು ಇಣಿಕಿಕ್ಕುವಳು.] ಇಂಥಾ ಚಾ ಕುಡಿದು ಥಾಲೀಪೆಟ್ಟು ತಿನ್ನುವದಕ್ಕಿಂತ ತೊಗಲ ತಿಂದು ಕಲಗಚ್ಚ ಕುಡಿದರ ಕೆಟ್ಟೇನು ? [ಎನಲು ಸೀತೆಯು ಬಾಯಲ್ಲಿ ಏನೋ ವಟಗುಡುವಳು. ರಾಮರಾಯನು ಕಡಯ ಗುಟುಕು ಕುಡಿದು ಮುಗಿಸಿರಬೇಕು. ಹೊರಗಿನಿಂದ–ರಾಮರಾಯರ ರಾಮರಾಯರ ಎಂಬ ಕರೆಯಾಗುವದು.] ಹೂಂ ಬಂದೆ ಬಂದೆ. [ಎಂದು ಕೈಯೊಳಗಿನ ಥಾಲಿಯನ್ನು ಕೆಳಗಿಟ್ಟು ಅವಸರದಿಂದ ಮೈಮೇಲೆ ಒಂದು ಧೋತರ ಹೊತ್ತುಕೊಂಡು ತಲೆಗೆ ರುಮಾಲು ಸಿಕ್ಕಿಸಿಕೊಂಡು, ಉಟ್ಟ ಧೋತರ ಸರಿಮಾಡಿಕೊಂಡು ಹರಕು ಮೊಚ್ಚೆಗಳನ್ನು ಹಾಕಿ ಕೊಳ್ಳುತ್ತ] ಬಂದೆ ಬಂದೆ [ಎನ್ನುತ್ತ ಹೋಗುವರು. ಸೀತೆಯು–ಯಜಮಾನಿ-ಆ ಎಲ್ಲ ಚಾದ ಒಡತಿಯಾಗುವಳು. ರಾಮ ರಾಯರು ಕುಳಿತ ಸ್ಥಳದ ಮೇಲೆ ತಾನು ಕುಳಿತು ಥಾಲಿಗೆ ಚಾ ಸುರುವ ಹತ್ತುವಳು.]

ಭೀಃ—ನನಗ ಇನ್ನಷ್ಟ ಚ್ಯಾನ [ಥಾಲಿ ಮುಂದೆ ಮಾಡುವನು.]

ಸೀಃ—ಎಷ್ಟ ಕುಡೀತಿ ಹೋಗೋ ಬೋಳ್ಯಾ. [ಎಂದು ಸುರುವಿ ಕೊಳ್ಳುವಳು.]

ಭೀಃ—ಇನ್ನಷ್ಟ [ಹೂ ಹೂ ಎಂದು ಅಳಹತ್ತುವನು.]

ಸೀಃ—[ಮೂಗು ಏರಿಸಿ ಎರಡು ಗುಟುಕು ಕುಡಿದು] ಅಮೃತ ಆಗೇದ ಚಾ, ಇಲ್ಲದ ಹೆಸರಿಟ್ಟರು [ಮತ್ತೆ ಕುಡಿದು] ಹದಿನೆಂಟ ಸಾರೆ ತಂಬಾಕ ತಿನ್ನೋದು ಇಪ್ಪತ್ತ ಸಾರೆ ಬೀಡೀ ಸೇದೋದು ರುಚಿ ಹತ್ತ ಅಂದರ ಹ್ಯಾಂಗ ಹತ್ತಬೇಕು. [ಮತ್ತೆ ಕುಡಿಯಹತ್ತುವಳು.]

ಭೀ:— ನನಗಷ್ಟು. [ ಎಂದು ಥಾಲಿಯ ಸಂಗಡ ಮುಂದೆ ಸರಿಯುವನು. ]

ಸೀ:—[ ಕುಡಿಯುತ್ತೆ ] ಹೊಟ್ಟ್ಯೋ ಏನ ರಂಕಾಳ ಕೆರಿಯೋ? ಹೋಗೋ ಒಡಿದೀತು. [ ಮತ್ತೆ ಕುಡಿಯ ಹತ್ತುವಳು. ]

ಭೀ:—ಇನ್ನಷ್ಟು. ಎಲ್ಲಾ ನೀನ ಕುಡೀತಿಯ? [ ಎಂದು ಅಳುತ್ತೆ ಜಗಿದಾಡುವನು. ]

ಸೀ:—ಹೋಗೋ...ಅಂಗೀ ತೊಟ್ಟುಕೊಂಡ ಆಡಲಿಕ್ಕೆ ಹೋಗೋ [ಎಂದು ಉಳಿದ ಚಾ ಸುರುವಿಕೊಂಡು ಕುಡಿಯುತ್ತ ಭೀಮನನ್ನು ಬಡಿಯ ಹೋಗುವಳು. ಅವನು ಅಳುತ್ತ ಹೊರಗೆ ಓಡುವನು. ]

— ಪರದೆ.



# ಗಾಯತ್ರೀ ಮಂತ್ರ.

ಮನೆಯ ಮುಂದಿನ ಒಂದು ಪಡಸಾಲೆ. ಮನೆಯು ಸಾಮಾನ್ಯ ತರಗತಿಯದು. ಸುಣ್ಣಬಡಿದ ಗೋಡೆಗಳು. ಗೋಡೆಗಳ ನಡುವೆ ನಾಗರಿ ಲಿಪಿಯಲ್ಲಿ ದೊಡ್ಡ ಶ್ರೀಕಾರ. ಟೀಕಾಚಾರ್ಯ, ಮಧ್ವಾಚಾರ್ಯ ಮುಂತಾದ ಆಚಾರ್ಯಪುಂಗವರ ಚಿತ್ರಪಟಗಳು ತೂಗಬಿದ್ದಿವೆ. ವಿಟ್ಠಲ, ಶ್ರೀರಾಮ, ಹನುಮ ಮುಂತಾದ ದೇವತೆಗಳ ಭಾವಪಟಗಳೂ ಇಳಿಬಿದ್ದಿವೆ. ಜಂತೆಗೆ ಕೋಲುಗಳನ್ನು ಕಟ್ಟಿ, ಅವುಗಳ ಮೇಲೆ ಸೀರೆ, ಪಂಜೆ, ಮಡಿ, ಧಾವಳಿ ಒಣಗಹಾಕಿವೆ. ನೆಲಕ್ಕೆ ಒಂದು ಹುಲ್ಲಿನಚಾಪೆ. ಅದರ ಮೇಲೆ ಮಧ್ಯದಲ್ಲಿ ಕೃಷ್ಣಾಜಿನ, ಗೂಟಗಳಿಗೆ ಶಾಲು, ಹೊರುವ ಅಂಚಿನ ಧೋತರ, ಅಂಗಿ, ಸಟಟು, ಜೋಣ್ಣ ನೇತು ಬಿದ್ದಿವೆ. ಬಾಗಿಲಬಳಿ ಎರಡು ಜೋಡು. ಒಂದು ಕಾಲಮರಿ, ಒಂದು ಮೊಚ್ಚೆ. ಡಬ್ಬ ಬಿದ್ದಿದೆ. ಅದರ ಹತ್ತಿರವೇ ಒಂದು ಒಡಕ ತೀರ್ಥದ ಗಿಂಡಿ. ದಾರಕಟ್ಟಿಕೊಂಡು ಉರುಳುತ್ತಿದೆ. ಒಂದೆರಡುಕಡೆ ಮಂತ್ರದ ಹಾಳೆಗಳು ಹಾರಾಡುತ್ತಿವೆ. ಆಗ ಸುಮಾರು ಮುಂಜಾನೆಯ ೧೧ ಗಂಟೆಯಾಗಿರಬೇಕು.

ವೇ. ಮೂ. ರಾ. ರಾ. ಸುರೇಶ್ವರಾಚಾರ್ಯರು-ಮನೆಯ ಮಾಲಿಕರು-ಹುಲ್ಲಿನ ಚಾಪೆಯ ಬದಿಗೆ ಒಂದು ಮಣೆಯ ಮೇಲೆ- ಬಾಗಿಲ ಹತ್ತಿರ -ಕುಳಿತಿರುವರು. ವಯಸ್ಸು ೪೦ರ ಹೊರಗೆ ಒಳಗೆ. ಕಬ್ಬಿಣ ಬಣ್ಣದ ಕೂದಲ ಕೂದಲ ಮೈಗೆ, ಎಣ್ಣೆ ಬಸಿವ ಉದ್ದಮೂಗಿನ, ಗುಳಿಗಣ್ಣಿನ, ಇಳಿ ಬಿದ್ದಕಿವಿಗಳ, ಹರವಾದ ಹಣೆಯ, ಬಿಳಿಯ ಬಣ್ಣದ ಮೊಂಡಮೀಸೆಯ ಮುಖ. ತಲೆಯ ಮೇಲಿನ ಚೆಂಡಿಕೆಯು ಗಂಟುಗಟ್ಟಿಕೊಂಡು ಹಿಂದೆ ಹಾರಾಡುತ್ತಿದೆ. ಸ್ನಾನದ ಸಿದ್ಧತೆಯಲ್ಲಿ ಒಂದು ಪಂಜೆಯನ್ನು ಉಟ್ಟು, ಒಂದು ಮೊಳಕಾಲಿಗೆ ಬಿಗಿದು ನಶ್ಯದ ಡಬ್ಬಿಯನ್ನು ತೆರೆದು ಕುಳಿತಿರುವರು.

ಅವರೆದುರು ಒಂದು ಕೈಮಾರು ಅಂತರದಲ್ಲಿ ಅವರ ಮಗ ಕೂರ್ಮನು ಲಂಗೋಟಿಯನ್ನು ಹಾಕಿಕೊಂಡು, ಹಣೆಗೆ ಶ್ರೀ ಗೋಪೀಚಂದನವನ್ನು ಧರಿಸಿಕೊಂಡು ಕೆಂಪು ಮೂಗಿನಿಂದ ಕುಳಿತಿರುವನು. ಅವನ ಮುಂದೆ ಒಂದು ತಾಮ್ರದ ತಾಬಾಣ. ಅದರೊಳಗೆ ಒಂದು ಹಿತ್ತಾಳಿಯ ಥಾಲಿ. ಥಾಲಿಯೊಳಗೆ ಒಂದು ಬೆಳ್ಳಿಯ ತೀರ್ಥಸವುಟು. ಲಂಗೋಟಿಯ ಹಿಂದಿನ ಚುಂಗು ತೀರ ಉದ್ದವಾಗಿ, ಹಾವಿನಂತೆ ಅಂಕಡೊಂಕ ಮಲಗಿದೆ ಕೂರ್ಮನ ವಯಸ್ಸು ೭ ತುಂಬಿ ೮ಕ್ಕೆ ಕಾಲಿಟ್ಟಿರಬೇಕು. ವರ್ಣ ಸಾದುಗಪ್ಪು. ಹುಡುಗ ಲಕ್ಷಣವಂತ. ಕಡುಬಿನಂತಹ ತುಂಬಿದ ಮೈಗೆ ಗೋಪೀಚಂದನದ ಶಂಖ ಚಕ್ರಗಳು ಎದ್ದು ಕಾಣುವವು. ಆದರೂ ಹುಡುಗಬುದ್ಧಿಯ ಚಂಚಲತೆ ಕಣ್ಣಲ್ಲುಂಟು....... .)

**ಸುರೇಶ್ವರಾಚಾರ್ಯ:**—(ಬೆರಳುಗಳಲ್ಲಿಯ ನಶ್ಯವನ್ನು ಮೂಗಿಗೆ ಸೇರಿಸಿಕೊಳ್ಳುತ್ತ) ಗಾಯತ್ರಿ... ಮಂತ್ರ.. . .

**ಕೂರ್ಮ:**— ಗಾ ... ತ್ರಿ ... ಮಂ ... ತ್ರ....

**ಸು:**—( ಚಿಮುಟಿಗೆಯನ್ನು ಜಾಡಿಸಿ ) ಜಪಂ......

**ಕೂ:**— ಜಪಂ......

**ಸು:**—( ಪಂಜೆಯಿಂದ ಮೂಗು ಒರಿಸಿ ) ಕರಿಷ್ಯ........

**ಕೂ:** – ಕರಿಷ್ಯ ....

**ಸು:** – ನೀರು ಬಿಡು.

**ಕೂ:**—(ಮರೆತು) ನೀರು ಬಿಡು. ( ನೀರು ಬಿಡುವನು.)

**ಸು:**— ಕೈಯೊಳಗೆ ಜನಿವಾರ ಹಿಡದು ಹತ್ತ ಸಾರೆ ಗಾಯತ್ರಿ ಮಂತ್ರ ಅನಬೇಕು......

**ಕೂ:**—( ತಲೆ ಹಾಕುವನು. )

**ಸು:**— ಹೇಳಿದಂತೆ ಅನ್ನು. ಇಲ್ಲಿ ನೋಡು.

**ಕೂ:**—ಹೂ. ( ಥಾಲಿಯನ್ನು ಸಪ್ಪುಟನಿಂದ ಬಾರಿಸುವನು. )

**ಸು:**— ಜನಿವಾರ ಹಿಡಿಯೋ! ( ಗದರಿಸುವರು. ಕೂರ್ಮನು ಗಾಬರಿಯಾಗಿ ಹಿಡಿಯುವನು. ) ಓಂ

**ಕೂ:** – ಓಂ ( ಒಳಗಿನಿಂದ ಸುರೇಶ್ವರಾಚಾರ್ಯರ ಹೆಂಡತಿಯಾದ ವಾಸಂತೀ ದೇವಿಯವರು ತಮ್ಮ ಮಗ ಚಿನ್ಮೂರ್ತಿಯನ್ನು ತಂದಿಳಸಿ ಅವನ ಮುಂದೆ ಅವಲಕ್ಕಿಯ ಕಲ್ಲುಪರಟಿಯನ್ನು ಇಟ್ಟು ಹೋಗುವರು. ಚಿನ್ನನಿಗೆ ೫ ತುಂಬಿ ೬ ವರುಷವಾಗಿರಬೇಕು ಅಣ್ಣನಿಗಿಂತ ಒಂದಿಷ್ಟು ಕಿಳಿ. ಮ್ಯೆಮೇಲೆ ಒಂದು ಹರಕು, ಹೊಲಸು ಅಂಗಿ. ಜುಲುಪಿಯ ತಲೆ. ಜೊಲ್ಲುಬಾಯಿ ಹಸಿಯ ಮೂಗು. ತಾಯಿಯ ಕಂಕುಳಿನಿಂದ ಇಳಿದದ್ದೇ ತಡ ಅವಲಕ್ಕಿಯನ್ನು ಬಾಯಿಗೆ ಹಾಕಿಕೊಂಡು ಅತ್ತ ಇತ್ತ ನೋಡುತ್ತ ಅಗಿಯ ಹತ್ತುವನು. ಕೂರ್ಮನ ಬಾಯಲ್ಲಿ ನೀರೂರಿ ನಿಲ್ಲುವವು. )

**ಸು:** — ಭೂರ ಭುಸ್ಸ್ವಾ . .

**ಕೂ:**—... .ಬುಸ್ವಾ ( ಚಿನ್ನನಿಗೆ ಅವಲಕ್ಕಿ ತಾ ಎಂದು ಕೈ ಸೊನ್ನೆ ಮಾಡುವನು. )

**ಸು:** – ಓಂ ....

**ಕೂ**— ಓಂ. . ( ಕಣ್ಣು ಮಿಟಕಿಸುತ್ತ ಹಾಗೆಯೆ ಬೇಡುವನು )

**ಸು:** — ತತ್ಸ .. ..

**ಕೂ:** – ತತ್ ಸ . .( ಕೈ ಹಿಂದೆ ತೆಗೆದುಕೊಳ್ಳುವನು. )

**ಸು:**— ವಿತುರ......

**ಕೂ:**—......ರ...( ತನ್ನ ಮುಂದಿನ ತಾಬಾಣ, ಥಾಲಿಯನು ಸರಿಸಿಕೊಂಡು ಮುಂದೆ ಹೋಗುವನು. ಚಿನ್ನನು ಚೀರುವನು. ಕೂರ್ಮನು ಗಾಬರಿಯಾಗಿ ಥಾಲಿಯೊಳಗಿನ ನೀರು ತೆಗೆದುಕೊಂಡು ಕೇಶವ, ನಾರಾಯಣ, ಮಾಧವ ಮಾಡಹತ್ತುವನು. ತಂದೆಯು ಸಿಟ್ಟಿನಿಂದ )

**ಸು**:—ಭರ್ಗೋ......( ಕಂಣು ತೆರೆಯುವನು. )

**ಕೂ**:— ( ಗರ್ಜನೆಗೆ ಎಚ್ಚತ್ತು ಸಾವರಿಸಿಕೊಂಡು, ಒಂದಿಷ್ಟು ಗಟ್ಟಿಸಿ ) ಭರ್ಗೋ......

**ಸು**:—ದೇವಶ್ಯ......

**ಕೂ**:— ( ತಂದೆಯು ಬೇರೆ ಕಡೆಗೆ ನೋಡುತ್ತಿರುವುದರಿಂದ ಚಿನ್ನನನ್ನು ಬೆದರಿಸುವುದಕ್ಕೆ ಬೆರಳನ್ನು ಮೂಗಿನ ಮೇಲೆ ಲಂಬವಾಗಿ ಹಿಡಿದು-ನಿನ್ನನ್ನು ಹಿಂದುಗಡೆ ನೋಡುವೆನು-ಎನ್ನುವಂತೆ ತಲೆಯನ್ನು ಹಾಕುತ್ತ ) ಹೂ... ..

**ಸು**:—ಧೀಮಹೀ......

**ಕೂ**:—ಧೀಮಹಿ......

**ಸು**:—ಧೀಯೋಯೋನಾ......

**ಕೂ**:—( ಮುಖದ ಮೇಲೆ ಒಪ್ಪಂದದ ಕಳೆಯನ್ನು ತಂದು ಚಿನ್ನನ ಬೆನ್ನ ಮೇಲೆ ಕೈಯಾಡಿಸಿ ತಾ ಎಂದು ಬೇಡುವವರಂತೆ ಕೈ ಮುಂಚಿ ಮಾಡುವನು. )......ಯೋನಾ......

**ಸು**:—ಪ್ರಚೋದಯಾತ್........

**ಕೂ**:—( ಹುಡುಗನು ಕೊಡುವದಿಲ್ಲ ) ... ಯಾತ.

**ಸು**:—ಓಂ.....

**ಕೂ**: - ( ಸಿಟ್ಟಿಗೆ ಬಂದು ಚಿವುಟುವನು. ಅದು ಚಿಟ್ಟನೆ ಚೀರಿ ಅಳಹತ್ತುವುದು. ಕೂರ್ಮನು ಗಾಬರಿಯಾಗಿ ಹಿಂದೆ ಸರಿದು ಗೊತ್ತಿಲ್ಲದವರಂತೆ ಕುಳಿತು ) ಓಂ ( ಗಟ್ಟಿಸಿ ನುಡಿಯುವನು. )

**ಸು**:—ಯಾಕೋ ! ಚೀರಲಿಕ್ಕೆ ಏನಾತು ?

**ಚಿನ್ನ**:—(ಅವಲಕ್ಕಿಯ ಬಾಯಿಂದ) ಇಣ್ಣ ಚಿವಟಿದಾ .. (ಎಂದು ಮತ್ತೆ ಅವಲಕ್ಕಿ ಬಾಯಿಗೆ ಹಾಕಿಕೊಳ್ಳುವುದು. )

**ಕೂ**:—ಇಲ್ಲಪ್ಪ......

**ಚಿ**:—ಇಲ್ಲಂತ. ಇಲ್ಲಿ ನೋಡು ( ಚಿವುಟಿದ ಸ್ಥಳವನ್ನು ತೋರಿಸಿ ಅವಲಕ್ಕಿಯನ್ನು ಬಾಯಿಗೆ ಹಾಕಿಕೊಂಡು " ಕಾವ್ ಕಾವ್ " ಎಂದು ಅಣಕಿಸಹತ್ತುವನು. )

**ಸು:—** ಸಂಧ್ಯಾನ ಮಾಡೋ ಸೂಳೀ ಮಗನೇ......ತಿನ್ನಲಿಕ್ಕೆ ಸಾಯತೀ......(ಎರಡು ನಿಮಿಷ ತಡೆದು) ಎಲ್ಲಿಗೆ ಬಂತು?... (ನೆನಿಸಿ ಕೊಂಡು) ಹೂ...ಓಂ ಭೂರ...ಭುಸ್ವಾ......

**ಕೂ:—**ಓಂ ಭುರಭುಸ್ವಾ....

**ಸು:—**ಓಂ ತತ್ಸ.

**ಕೂ:—** ( ಮುದ್ರೆಯ ಪೆಟ್ಟಿಗೆಯೊಳಗಿನ ದೀಪದ ನಾಲಗೆಯನ್ನು ತೆಗೆದು ಚಿನ್ನನಿಗೆ "ಹಿಡಿ" ಎನ್ನುವನು. ಅವನು ಅದನ್ನು ಬೇಡುವನು. ಪ್ರತಿಯಾಗಿ ಅವಲಕ್ಕಿ ಬೇಡುವನು. ಚಿನ್ನನು ಮೊದಲಾಗಿ ಬೇಡುವನು. ಕೊಡುವನು. ಕೂರ್ಮನು ಅವಲಕ್ಕಿಗೆ ಕೈ ಮುಂದೆ ಮಾಡುವನು. ಅವನು ಕೊಡುವದಿಲ್ಲ) .. ..ತತ್ಸ,

**ಸು:—**ವಿತುರ......

**ಕೂ:—**( ನಾಲಗೆಯನ್ನು ತೆಗೆದು ಕೊಂಡದ್ದಕ್ಕೆ ಒಂದಿಷ್ಟು ಜುಲು ಮೆಯಿಂದ ಅವಲಕ್ಕಿ ತಾ ಎಂದು ಬೇಡುವನು. ಅವನು ಇಲ್ಲವೆಂದು ನಾಲಗೆಯನ್ನು ಬೀಸಿ ಒಗೆಯುವನು. ಅದರಿಂದ ಕೋಪಗೊಂಡು ಅವಲ ಕ್ಕಿಯ ಕಲ್ಲುಪರಟಿಗೆ ಕೈ ಹಾಕುವನು. ಅವನು ಶಂಖ ವಾದ್ಯ ಮಾಡು ವನು. ಮತ್ತೆ ಸಾವರಿಸಿಕೊಂಡು ಕೂಡುವನು. ಮುಖದ ಮೇಲೆ ಗಾಬರಿ ಯಾದ ಕಳೆ ... )......ರ.

**ಸು:—**(ಕೈಯೊಳಗಿನ ನಶ್ಯದ ಡಬ್ಬಿಯನ್ನು ನಡಕ್ಕೆ ಸೇರಿಸಿಕೊಂಡು) ಏ.... ಹುಚ್ಚ ಸೂಳೀ ಮಗನೇ... (ಎಂದು ಅವಡು ಗಚ್ಚಿ ಬಡಿಯ ಹೋಗುವರು. )

**ಕೂ:—** [ಎತ್ತಿದ ಕೈಗಳನ್ನು ತಡಯುವವರಂತೆ] ಇಲ್ಲಪಾ... ನಾ...ಏನೂ ಮಾಡಿಲ್ಲ......

**ಸು:—**ಏನೂ ಮಾಡದೇ ಅಳುವನೇನೋ? [ಕಣ್ಣು ತೆರೆಯುವರು ......] ನೀನು ಇಲ್ಲಿ ಬಾ... ಬಾಳಾ... [ಹತ್ತರ ಎಳೆದು ಕೊಳ್ಳುವರು.] ವರೇಣ್ಯಂ......

**ಕೂ:—** ವರೇಣ್ಯಂ......

**ಸು:—** ಭಗೋರ್......

ಕೂಃ— ಭರ್ಗೋ...[ಎಂದು ಮುದ್ರೆಯ ಪೆಟ್ಟಿಗೆಯೊಳಗಿನ ಒಂದು ಗಾಜಿನ ಮಣಿಯನ್ನು ಚಿನ್ನನ ಮುಂದೆ ಹಿಡಿಯುವನು. ಅವನು ಉತ್ಸುಕತೆಯಿಂದ ಮುಂದೆ ಸರಿದು ಬರುವನು.]

ಸುಃ—ದೇವಶ್ಯ......

ಕೂಃ— ದೇವಶ್ಯ... [ ತಗೋ ಎಂಬ ಭಾವನೆಯಿಂದ ಮುಂದೆ ಇಡುವನು. ಹುಡುಗನು ತೆಗೆದು ಕೊಳ್ಳುವನು. ಸುರೇಶ್ವರಾಚಾರ್ಯರು ನೋಡಿ ಸಿಟ್ಟಿನಿಂದ...]

ಸುಃ— ಲುಚ್ಚಾ.. [ಎಂದು ಗುದ್ದ ಹೋಗುವರು.]

ಕೂಃ— ಇಲ್ಲಪಾ... ಅವಾ ಬೇಡಿದಾ... ನಾ ಸಂಧ್ಯಾನ ಅನ್ನ ಹತ್ತೇನು...[ಎಂದು ಮಿಳಿ ಮಿಳಿ ಅಳುವನು.]

ಸುಃ—[ಎರಡು ನಿಮಿಷ ಸಿಟ್ಟಿನಿಂದ ಕಣ್ಣು ಬಿಟ್ಟು] ಧೀಮಹೀ...

ಕೂಃ— [ ಕೈ ಮುಟ್ಟಿಗೆಯನ್ನು ಕಟ್ಟಿ ಚಿನ್ನನಿಗೆ ಗುದ್ದುವೆನು ನೋಡು ಎಂಬ ಬೆದರಿಕೆಯನ್ನು ಹಾಕಿ ] ಧೀಮಹೀ. . ..

ಚಿಃ – ಅಪ್ಪಾ ನೋಡು. [ಅವಲಕ್ಕಿಯನ್ನು ಬಾಯಿಗೆ ಹಾಕುವನು ]

ಸುಃ – [ಸಿಟ್ಟಿನಿಂದ] ಧೀಯೋಯೋನಾ... ..

ಕೂಃ— ಧೀಯೋಯೋನಾ......

ಸುಃ— ಪ್ರಚೋದಯಾತ .. .

ಕೂಃ— ಪ್ರಚೋದಯಾತ .....

ಸುಃ— ಓಂ.

ಕೂಃ-- ಅಪ್ಪಾ .. ಹತ್ತಾದು ...

ಸುಃ-- ಎಲ್ಲೀ ಹತ್ತ್ತೇ......! .. ನಾಲ್ಕಾದು. ಹೂ... ಅನ್ನು.

ಕೂಃ-- ಹೂ... ಓಂ...

ಸುಃ-- ಭೂರಭುಸ್ವಾ......[ಅಷ್ಟರಲ್ಲಿ ಒಂದು ಕೋಳಿಯ ಪುಚ್ಛವು ಗಾಳಿಗೆ ಹಾರಿ ಕಿಡಿಕಿಯ ಮಾರ್ಗವಾಗಿ ಒಳಗೆ ಬರುವುದು ಅದು ಕೂರ್ಮನ ಕಣ್ಣಿಗೆ ಬೀಳುವದು. ಹಿಡಿಯುವ ಹವಣಿಕೆಯಿಂದ ಏಳ ಬಯಸುವನು. ಆದರೆ ತಂದೆಯು ಎದುರು ಕುಳಿತಿರುವನು. ]

ಕೂಃ--[ ಪುಚ್ಛದ ಕಡೆಗೆ ಕಣ್ಣಿಟ್ಟು ] ಭೂರಭೂಸ್ವಾ......

**ಸು:** — ಓಂ......

**ಕೂ:**— ಓಂ ..[ಗಾಳಿಯಲ್ಲಿ ಅದರ ಕಡೆಗೆ ಕೈ ಮಾಡಿ ಬಾ-ಬಾ ಎಂದು ಕರೆಯುವನು. ]

**ಸು:** —ತತ್ಸ...... [ ನಶ್ಯದ ಡಬ್ಬಿಯನ್ನು ಬೆರಳಿನಿಂದ ಬಡಿದು ತೆರೆಯುವರು. ]

**ಕೂ:**—ತತ್‌ಸ್‌.... [ ತಂದೆಯ ಕಡೆಗೆ ನೋಡುವನು. ಅವರು ನಶ್ಯದ ಡಬ್ಬಿಯಲ್ಲಿ ಮೈಮರೆತಿರುವರು. ಅದಕ್ಕೆ ಮೆಲ್ಲಗೆ ಎದ್ದು ಅದನ್ನು ಹಿಡಿಯಲಿಕ್ಕೆ ಮೇಲೆ ಜಿಗಿಯುವನು ಅದು ಸಿಗುವದಿಲ್ಲ. ಅಂಜಿ ಪೂರ್ವದ ಸ್ಥಳಕ್ಕೆ ಬರುವನು. ಮನಸ್ಸು ಮಾತ್ರ ಅದರ ಹಿಂದಿನಿಂದಲೇ ಹಾರಾಡುತ್ತಿರುವುದು. ಒಳಗೆ ಏನೋ ಬಿದ್ದ ಸಪ್ಪಳವಾಗುವದು ಸುರೇಶ್ವರರು ನಶ್ಯದ ಡಬ್ಬಿಯನ್ನು ಕೈಯಲ್ಲಿ ಹಿಡಿದುಕೊಂಡು ಹೋಗುವರು.]

**ಒಳಗಿನಿಂದ:**—[ಸುರೇಶ್ವರರೇ...] ವಿತುರ... .

**ಕೂ:**—[ಸ್ವತಂತ್ರತೆ ಸಿಕ್ಕವರಂತೆ ಚೆಂಗನೆದ್ದು ಪುಚ್ಚವನ್ನು ಹಿಡಿಯಲಿಕ್ಕೆ ಜಿಗಿದಾಡುವನು. ಬಾಯಿಂದ ತಂದೆಯು ಹೇಳಿದ ಸಂಧ್ಯಾವಂದನೆಯನ್ನು ಮಾತ್ರ ತಪ್ಪದೆ ಅನ್ನುತ್ತಿರುವನು.] ವಿತುರ.

**ಒಳಗಿ:**— ವರೇಣ್ಯಂ... ..

**ಕೂ:** —ವರೇಣ್ಯಂ...... [ಪುಚ್ಚವು ಸಿಗುವದಿಲ್ಲ. ಒಮ್ಮೆ ಮೇಲೆ ಹೋಗಿ ಒಮ್ಮೆ ಕೆಳಗೆ ಬರುವುದು. ಕೆಳಗೆ ಬಂದದ್ದನ್ನು ಅವಸರದಿಂದ ಹಿಡಿಯಬೇಕೆಂದು ಹೋಗಿರಲು ಅದು ತನ್ನದೇ ಉಸಿರಿನಿಂದ ಮತ್ತೆ ಮುಂದೂ ಮೇಲೂ ಹೋಗುವುದು. ]

**ಒಳಗಿ:**— ಭರ್ಗೋ......

**ಕೂ:**—ಭರ್ಗೋ......[ ಗೋಡೆಯ ಮೇಲೆ ಕೂತಂತೆನಿಸುವದು. ಬಾಯಿಂದ ಬಾ-ಬಾ ಎನ್ನುವವರಂತೆ ಕೈಯಿಂದ ಕರೆಯುವನು. ಬರುವದಿಲ್ಲ ಗಾಳೀ ಹಾಕುವನು. ಅದು ಮತ್ತೆ ಮೇಲೇರುವದು. ]

**ಒಳಗಿ:**—ದೇವಶ್ಯ......

ಕೂಃ—ದೇವಶ್ಯ... ( ಮತ್ತೂ ಮೇಲೆ ಹೋಗುವುದು. ಚಿನ್ನನು ಇಷ್ಟರಲ್ಲಿ ಅವಲಕ್ಕಿಯನ್ನು ತೀರಿಸಿ ಕಲ್ಲುಪರಟಿಯನ್ನು ಡಬ್ಬುಹಾಕಿ ತಾನೂ ಪುಚ್ಛವನ್ನು ಹಿಡಿಯ ಹೋಗುವನು. ಕೂರ್ಮನು ಅವನನ್ನು ಹಿಂದಿನ ಸಿಟ್ಟಿನಿಂದ ನೂಗಿಸುವನು. ಅವನು ಧಾಡಿನೆಂದು ಬೀಳುವನು. ಅಳಹತ್ತುವನು. ಕೂರ್ಮನು ಕೋಳಿಯ ಪುಚ್ಛಿನಲ್ಲಿಯೇ ವ್ಯೈಮರೆತಿರುವನು. ಸುರೇಶ್ವರರು ಬರುವಂತೆನಿಸುವುದು. ಚಿನ್ನನು ಅವನ ತೀರ್ಥಸವುಟನ್ನು ತೆಗೆದು ಬಚ್ಚಿಡುವನು. ತಂದೆಯು ಒಳಗೆ ಬರುವುದಕ್ಕೂ ಕೂರ್ಮನು ತನ್ನ ಸ್ಥಳವನ್ನು ಅವಸರದಿಂದ ಹಿಡಿಯುವದಕ್ಕೂ ಒಂದಾಗಿ ಕಾಲು ಥಾಲಿಗೆ ಬಡಿದು ನೀರು ಉರುಳಿ ಬಿಡುವವು. )

ಸುಃ—ಒಂದೇ ಕಡಿಗೆ ಕುಳಿತು ಸಂಧ್ಯಾವಂದನೆಯನ್ನು ಮಾಡೋ ! ( ಎಂದು ಅವನ ಕೆನ್ನೆಗೆ ಹೊಡೆಯುವರು. ಅವನು ತಪ್ಪಿಸಿಕೊಂಡು )

ಕೂಃ— ( ಅಳುವವರಂತೆ ) ಅಂತೇನಪ್ಪಾ .

ಸುಃ—( ಬಂದ ಶಿಟ್ಟನ್ನು ಕಣ್ಣುತೆರೆದು ನುಂಗಿ ) ಧೀಮಹೀ...

ಕೂ:—ಧೀಮಹೀ .. ( ದೃಷ್ಟಿಯೆಲ್ಲ ಪುಚ್ಛದ ಮೇಲೆಯೇ ಇರುವುದು. ಅದು ಇಷ್ಟರಲ್ಲಿ ಮೆಲ್ಲಗೆ ಕೆಳಕೆಳಗೆ ಇಳಿಯುತ್ತ ಬರುತ್ತಿರುವುದು. ಸುರೇಶ್ವರರ ದೃಷ್ಟಿಯು ಒಳಗಡೆಗೆ ಇರುವುದು. ಮುಖವನ್ನು ಆಕಡೆಗೇ ಮಾಡಿ ಮಂತ್ರ ಹೇಳುತ್ತಿರುವರು. )

ಸು:— ಧೀಯೋಯೋನಾ......

ಕೂಃ— ಧೀಯೋಯೋನಾ...( ಪುಚ್ಛವು ನೆಟ್ಟಗೆ ಆಚಾರ್ಯರ ತಲೆಯ ಮೇಲೆ ಇಳಿಯುವದು. ಚಿನ್ನನು ತಾ ಮೊದಲು ಹಿಡಿದು ಕೊಳ್ಳಬೇಕೆಂದು ದೂರಿನಿಂದಲೇ ಕೈಯೊಡ್ಡಿನಿಂತಿರುವನು. ಕೂರ್ಮನು ಮೆಲ್ಲಗೆ ಹೋಗಿ ಅವನಕಿಂತ ತಾನೇ ಮೊದಲು ಹಿಡಿಯಬೇಕೆನ್ನುವನು. )

ಸುಃ—ಪ್ರಚೋದಯಾತ...

ಕೂಃ—ಪ್ರಚೋದಯಾತ... ( ಎಂದು ಅವಸರದಿಂದ ತಂದೆಯ ತಲೆಯಮೇಲೆ ಇಳಿಯುವ ಪುಚ್ಛಕ್ಕೆ ಟಣ್ಣನೆ ಹಾರುವನು. ಚಿನ್ನನಿಗೂ, ಇವನಿಗೂ ಒಂದಿಷ್ಟು ತಿಕ್ಕಟ-ಮುಕ್ಕಾಟವಾಗುವುದು. ಇಬ್ಬರೂ ತೆಕ್ಕೆ ಬಿದ್ದು ತಂದೆಯ ಮೇಲೆ ಬೀಳುವರು. ಆಚಾರ್ಯರು ಗಾಬರಿಯಾಗುವರು)

**ಸುಃ**—ಸೂಳೀಮಗನೇ (ಒಂದೆರಡು ಹೊಡೆತಗಳನ್ನು ಕೊಡುವರು. ಇಬ್ಬರೂ (ಹುಡುಗರು) ಗಾಬರಿಯಾಗಿ ತಮ್ಮ ಸ್ಥಳದ ಮೇಲೆ ಹೋಗಿ ಕೂಡುವರು. ಕೂರ್ಮನು ಮೆಲ್ಲಗೆ ಅಳುತ್ತಿರುವನು. ಚಿನ್ನನು ಇದೆಲ್ಲವನ್ನು ಬೆದರಿ ನೋಡುತ್ತಿರುವನು. ಆಚಾರ್ಯರು ಕಣ್ಣಿನಿಂದ ಕಿಡಿಗಳನ್ನು ಹಾರಿಸುತ್ತ ) ಒಂದು ಸಂಧ್ಯಾನ ಮಾಡೋದರೊಳಗ ಎಷ್ಟು ಗಲಾಟಿ ! ಎಷ್ಟು ತಂಟಿ !! ಎಷ್ಟು ನ್ಯಾಯ !!

**ಕೂಃ**— ನನ್ನ ಸವುಟು ತಗೊಂಡಾನು ನೋಡು (ಎಂದು ಅಳಹತ್ತುವನು. ಚಿನ್ನನು ಅವನ ಸವುಟನ್ನು ಅವನ ಕಡೆಗೆ ಒಗೆಯುವನು.)

**ಸುಃ**—ಆಗಿನಿಂದ ನೋಡತೇನು ಒಂದೇಸವನೇ ನ್ಯಾಯ... ( ಸಿಟ್ಟಿನಿಂದ ಗರ್ಜಿಸಿ ) ಕೋಳೀ ಪುಚ್ಚ ಯಾತಕ್ಕೋ ! ತಕ್ಕೊಂಡೇನು ತಲ್ಯಾಗ ತುರಿಕ್ಕೋತೀ ಏನೋ ? ಇನ್ನೊಮ್ಮೆ ಎದ್ದಿ ಅಂದ್ರ ನೋಡ ! ನಿನ್ನ ಕೊಂದ ಹಾಕತೇನು !... ಗಾಯತ್ರೀ ಮಂತ್ರ ಒಂದಾರೆ ಮುಗಿಸೇನಂದರ ಅಷ್ಟಾಗ ಲೊಲ್ಲದು. ಸೂಳೀಮಗಾ... ತಿಂಗಳಾತು ಒಂದೇ ಸವನೇ ಹೇಳತೇನು ಪಾಠ ಇಲ್ಲ.

**ಚಿನ್ನಃ**—(ಅವನ ಬಳಿಗೆ ಹೋಗಿ ಮುಖ ನೋಡಹತ್ತುವನು.)

**ಕೂಃ**—(ಅಳುತ್ತೆ) ಹೋಗೋ ( ಚೀರುವನು. ಅವನು ಸರಿದು ಹೋಗುವನು. )

**ಸುಃ**— ಇಲ್ಲಿ ಬಾರೋ (ಕರೆದು ಕೊಳ್ಳುವರು.) ಹೂ. ಓಂ... ಭೂರ ಭುಸ್ವಾ. ....

**ಕೂಃ**—(ಅಳುತ್ತೆ) ಓಂ... ಭುಸ್ವಾ .

**ಸುಃ**— ಜನಿವಾರ ಹಿಡಿ......

**ಕೂಃ**—( ಬಿಕ್ಕುತ್ತೆ) ಹಿಡಿದೇನು ನೋಡು......

**ಸು**:—ಎಲ್ಲಾ ಎಳಿ ಕೂಡಿಸಿ ಹಿಡಿಯೋ ( ಎಲ್ಲಾ ಕೂಡಿಸಿ ಮುದ್ದಿ ಮಾಡಿ ಹಿಡಿಯುವನು. ) ಓಂ...

**ಕೂಃ**—ಓಂ ......

**ಸುಃ** – ತತ್ಸ.......

**ಕೂಃ**—ತತ್ಸ (ಕೈಯೊಳಗಿನ ಪುಚ್ಚದ ಪರೀಕ್ಷೆಯಲ್ಲಿ ತೊಡಗಿರುವನು. ಅದು ನೆನೆದಿದೆ. ಚಿನ್ನನು ಇಳಿದು ಅವನ ಬಳಿಗೆ ಬರುವನು. )

ಸು:—ವಿತುರ...

ಕೂ:—ವಿತುರ (ಚಿನ್ನನು ಅದನ್ನು ಬೇಡುವನು.)

ಸು:—ವರೇಣ್ಯಂ......

ಕೂ:—(ಇಲ್ಲೆಂಬ ಭಾವನೆಯಿಂದ ) ವರೇಣ್ಯಂ......

ಸು:—ಭರ್ಗೋ......

ಕೂ:—(ಮರಗೂಳಿಯಿಂದ ಪುಚ್ಚವನ್ನು ಒಂದು ಕಡೆಗೆ ಇಟ್ಟು ಹೊರಗೆ ಬಾರಿಸುವುದನ್ನು ನಿರೀಕ್ಷಿಸುವನು. ) ಭರ್ಗೋ...( ಚಿನ್ನನು ಅದನ್ನು ತೆಗೆದುಕೊಳ್ಳುವನು. ಹೊರಗೆ ಬಾರಿಸುವುದು ಹೆಚ್ಚಾಗುವದು. ಸಿನೇಮಾದ ಹ್ಯಾಂಡಬಿಲ್ಲು ಹಂಚುವವರ ಮೇಳ. ಬಾಗಿಲ ಮುಂದೆ ಬಾರಿಸುತ್ತ ಹೋಗುವರು. ಕೂರ್ಮನ ಮನಸ್ಸು ಚಟಪಟಿಸು ವದು. ಆದರೆ ತಂದೆ! ಅಷ್ಟರಲ್ಲಿ ಒಬ್ಬ, ಹ್ಯಾಂಡಬಿಲ್ಲು ಬಾಗಿಲಲ್ಲಿ ಒಗೆಯುವನು.)

ಚಿ:—ಚಿರಂಜೀವಿ... (ಎಂದು ನುಡಿದು ಅದನ್ನು ತೆಗೆದುಕೊಳ್ಳಲಿಕ್ಕೆ ಹೋಗುವನು. ಅದಕ್ಕೂ ಪೂರ್ವದಲ್ಲಿ ಕೂರ್ಮನು ಜಿಗಿಯುವನು. ಒಂದು ತುದಿ ಇವನ ಕೈಯಲ್ಲಿಯೂ, ಒಂದು ತುದಿ ಕೂರ್ಮನ ಕೈಯ ಲ್ಲಿಯೂ ಸಿಕ್ಕು ಜಗ್ಗಾಟದಲ್ಲಿ ಹರಿಯುವದು. ಚಿನ್ನನು ಅಳಹತ್ತುವನು. ಕೂರ್ಮನು ಮೊದಲಿನ ಸ್ಥಳಕ್ಕೆ ಬಂದು ಕೂಡುವನು. ಚಿನ್ನನ ಅಳುವು ಏರುತ್ತ ಬರುವದು. ಆಚಾರ್ಯರು ಸಿಟ್ಟಿನಿಂದ ಕಿಡಿಕಿಡಿಯಾಗುವರು. ಎದ್ದು ಕೂರ್ಮನಿಗೆ ಚನ್ನಾಗಿ ಹೊಡೆಯುವರು. ಅವನೂ ಅಳಹತ್ತುವನು. ಐದಾರು ನಿಮಿಷ ಈ ಅಳುವು ಹಾಗೇ ನಡೆಯುವದು.)

ಸು:— ( ಕಿಡಿಕಿಡಿಯಿಂದ ) ಕೂರ್ಮ್ಯಾ...... ಸೂಳೀಮಗನೇ, ಸಂಧ್ಯಾನ ಮಾಡಲಿಕ್ಕೆ ಕುಳಿತೀದಿ ಕುಳಿತೀದಿ, ಆಗಿನಿಂದ ನೋಡತೇನು, ಸುಮ್ಮನೆ ಕುಳಿತು ಒಂದ ಮಂತ್ರಾರೆ ಅಂದದ್ದು! — ಅವಲಕ್ಕಿ ಅಂತ ಆಗ ಹುಡುಗನ್ನ ಅಳಸಿದಿ... ಕೋಳೀ ಪುಚ್ಚ ಅಂತ ಹುಡುಗನ್ನ ಕೂಡಿಕೊಂಡ ನನ್ನಮ್ಯಾಲ ಬಿದ್ದಿ... ಈಗ ಹ್ಯಾಂಡಬಿಲ್ಲ ಅಂತ ನ್ಯಾಯ ಮಾಡತೀ...... ಸಂಧ್ಯಾನ ಮುಗಿಯೋವರೆಗೆ ಕೂತ ಅನ್ನೋ......ಆಮ್ಯಾಲ ಹಾಳಭಾವೀ ಬೀಳಂತ ಕತ್ತೇಮಗನೇ .. ... (ಎಂದು ಒಂದೆರಡು ನಿಮಿಷ ತಡೆದು

ಸಿಟ್ಟನ್ನು ನುಂಗಹತ್ತುವರು. ಕೂರ್ಮನ ಅಳುವೂ ಇಳಿಯುತ್ತ ಬರುವದು. ಕೂಸು ಉತ್ಸುಕತೆಯಿಂದ ನೋಡಹತ್ತಿರುವದು.)

ಕೂಃ—ನಂದ್ಯಾಕ ಹರೀಬೇಕು ಅವಾ...?

ಸುಃ—ಏನೋ....ಏನೋ ನಿಂದು?

ಕೂಃ— ಪುಚ್ಚಾ...ಇಲ್ಲಿ ನೋಡು. ( ಎಂದು ತಂದೆಯ ಮುಂದೆ ನೆನೆದ ಪುಚ್ಛವನ್ನು ಒಗೆಯುವನು.)

ಸುಃ— ಪುಚ್ಚಾ ತಕ್ಕೊಂಡು ಏನ ಮಾಡತೀಯೋ ?

ಕೂಃ—(ಅಳುತ್ತ) ಪುಸ್ತಕದಾಗ ಹಾಕಿಡತೇನು ?

ಸುಃ— ನಿನ್ನ ತಲಿ.....

ಕೂಃ— ನಮ್ಮ ಮಾಸ್ತರ ಸುದ್ದಾ ಇಡತಾರ!

ಸುಃ— ನಿಮ್ಮ ಮಾಸ್ತರು, ನೀನು ಎಲ್ಲಾ ಹಾಳಾತು.

ಕೂಃ— ನನ್ನ ಪುಚ್ಚಾ ಕೊಡೋ! (ಎಂದು ಹುಡುಗನ ಕಡೆಗೆ ಸರಿಯುವನು. ಹುಡುಗನು ತಂದೆಯ ಕಡೆಗೆ ಸರಿಯುವನು.)

ಸುಃ—( ಸಿಟ್ಟಿನಿಂದ ) ಒಂದ ಕೋಳೀನ ತಂದ ಕೊಡತೇನು...... ಸಂಧ್ಯಾನ ಮಾಡೋ......

ಕೂಃ— ಸಾಕ ಹೋಗೋ......

ಸುಃ— ಮುಗೀಲಿಕ್ಕೆ ಬಂತೋ...ಅನ್ನು...

ಕೂಃ— ಹಸಿವಿ ಆಗೇದ......

ಸುಃ— ಬೆಲ್ಲಾ ಹಿಟ್ಟ ತಿಂದ ಮತ್ತೆಂಥಾ ಹಸಿವಿ ?

ಕೂಃ— ಒಲ್ಲ ಹೋಗೋ...

ಸುಃ— ಇನ್ನ ನಾಲ್ಕಾರೆ ಜಪಾ ಮಾಡಿ ಗಾಯತ್ರಿ ಮಂತ್ರಾರೆ ಮುಗಿಸೋ...ಓಂ...

ಕೂಃ— (ಅಳುತ್ತ) ಓಂ (ಎಳೆಯುವನು.)

ಸುಃ— ಭೂರಭುಸ್ವಾ......

ಕೂಃ— ಭೂರಭುಸ್ವಾ......

ಸುಃ— ಓಂ...

ಕೂಃ— ಓಂ... ( ಕೂಸು ಕೆಳಗಿಳಿದು ಬಂದು ಆಪುಚ್ಛವನ್ನು ತೆಗೆದುಕೊಂಡು ಪರೀಕ್ಷಿಸುವುದು.)

ಸು:— ತತ್ಸ.......

ಕೂ:—ತತ್ಸ. (ಚಿನ್ನನಿಗೆ) ಇಂದ ನಿನ್ನ ಸಿನೇಮಾಕ್ಕೆ ಕರಕೊಂಡು ಹೋಗೋದಿಲ್ಲ ಹೋಗು.

ಚಿ:— ಅಪ್ಪಾ ನೋಡು......ನಿನ್ನ ಬಿಟ್ಟ ಹೋಗತೇವ ಹೋಗು. (ಸುಂಬಳ ಒರಿಸಿಕೊಳ್ಳಲಿಕ್ಕೆ ಅರಿವೆ ಹುಡುಕುವನು. ಸಿಗುವದಿಲ್ಲ. ಕೂರ್ಮನ ಹಿಂದೆ ಬಿದ್ದ ಲಂಗೋಟಿಯಿಂದ ಒರಿಸಿಕೊಳ್ಳುವನು. ಇದು ಕೂರ್ಮನ ಕಣ್ಣಿಗೆ ಬೀಳುವುದು.)

ಸು:—ವಿತುರ......

ಕೂ:— ವಿತುರ. (ಸಿಟ್ಟಿನಿಂದ ಚಿನ್ನನ ಬೆನ್ನಮೇಲೆ ಮುಷ್ಟಿಗೆಯನ್ನು ಮಾಡಿ ಎರಡು ಗುದ್ದು ಹಾಕುವನು. ಅವನು ಚಿಟ್ಟನೆ ಚೀರಿ ಅಳಹತ್ತುವನು. ಆಚಾರ್ಯರು ತಾವೂ ತಾಳಲಾರದೆ ಸಿಟ್ಟಿನಿಂದ ಕೂರ್ಮನ ಬೆನ್ನ ಮೇಲೆ ಎರಡು ಗುದ್ದು ಇಳಿಸುವರು. ಇಬ್ಬರೂ ಚೀರಿಕೊಂಡು ಅಳಹತ್ತುವರು. ಎರಡು ನಿಮಿಷ ನೀರವ)

ಕೂ:— (ಅಳುತ್ತ) ನನ್ನ ಲಂಗೋಟಿಗೆ ಮೂಗ ಯಾಕ ಒರಸಬೇಕು......?

ಸು:— ಏನಾತೋ......?

ಕೂ:—ನೋಡು (ಎಂದು ಆ ಚುಂಗವನ್ನು ತೋರಿಸುವನು. ಅಳುವು ಹಾಗೇ ಇರುವುದು)

ಸು:—ಹೌದೇನೋ ? (ಚಿನ್ನನನ್ನು ಎಳೆದುಕೊಂಡು ತಮ್ಮ ಪಂಜೆಯಿಂದ ಮುಖ ಒರಿಸುವರು.)

ಕೂ:— ನಾ ಏನ ಈ ಲಂಗೋಟಿ ವಲ್ಲ ಹೋಗು. (ಅದನ್ನು ಕಳೆದು ಒಗೆಯುವನು. ಅಳುವು ಬಿಕ್ಕಿನಲ್ಲಿ ಪರಿಣಮಿಸಿರುವುದು.)

ಸು:— (ಒಳಗೆ ಮುಖ ಮಾಡಿ) ಏನ ? ಇವಗ ಇನ್ನೊಂದ ಲಂಗೋಟಿ ತಾ......

ಒಳಗಿನಿಂದ:— ಏನು ?

ಸು:— ಈ ಸೂಳೀಮಗನಿಗೆ ಇನ್ನೊಂದು ಲಂಗೋಟಿ ತಾ. ಬತ್ತಲೆ ನಿಂತಾನು......

**ಒಳಗಿನಿಂದ:—** (ವಾಸಂತೀ ದೇವಿಯವರು ಬರುವರು. ಆಚಾರ್ಯರ ಹೆಂಡತಿ. ಹಣೆತುಂಬ ಕುಂಕುಮ. ಕೆನ್ನೆಯ ತುಂಬ ಅರಿಷಿಣ. ಅಂಚಿನ ಸೀರೆ; ಮಾಸಿಬಣ್ಣ ಇಳಿದಿದೆ. ತುರುಬನ್ನು ಕಟ್ಟಿರುವಳು. ವಯಸ್ಸು ೩೨ ಆಗಿರಬೇಕು. ಸಾದುಗಪ್ಪು. ನೋಡಲಿಕ್ಕೆ ಸಾಮಾನ್ಯಳು.) ಊಟಕ್ಕ ಕರೆದ ಹೋದರು. ಸಂಧ್ಯಾನ ಮುಗೀತೋ ಇಲ್ಲೋ?

**ಸು:—** ಏನ ಮಾಡತಾನು? ಅವರಪ್ಪ ಮಾಡಿದರ ಸರಿ.

**ವಾಸಂತಿ:—** ಹಾಗ ಮಾಡಿದರಾತು.! ಒಂದ ಅನ್ನೋದ ಎರಡ ಅಂದರಾತು.... ..

**ಸು:—** ಸಾಕ. ನೀ ಹೇಳಾಕಿ ಚೆಲುವಿ. (ಏಳುವರು.)

**ವಾಸಂತಿ:—** ಬಿಡಿರಿ ಹಂಗಾರ. (ಆಚಾರ್ಯರು ನಸ್ಯದ ಡಬ್ಬಿಯನ್ನೂ, ಕಾಲಿಗೆ ಸುತ್ತಿದ ಪಂಜೆಯನ್ನೂ ತೆಗೆದುಕೊಂಡು ಒಳಗೆ ಹೋಗುವರು. ತಾಯಿಯು ಕೂರ್ಮನನ್ನು ಎಬ್ಬಿಸಿ ಸೆರಗಿನಿಂದ ಮುಖ ಒರಿಸಿ ಮಡಿ ಲಂಗೋಟಿಯನ್ನು ಹಾಕಿ, ಕೈಯಲ್ಲಿ ಥಾಲೀ ಕೊಟ್ಟು, ಮೈಮೇಲೆ ಒಂದು ಮಡಿಯನ್ನು ಹೊಚ್ಚಿ) ಗೋಪಾಲರಾಯರ ಮನೆಗೆ ಊಟಕ್ಕೆ ಹೋಗು. ಕರೆದು ಹೋಗಿರುವರು.

**ಕೂ:—** ಅಡಿಗೀ ಏನ ಮಾಡ್ಯಾರು?

**ವಾ:—** ಯಾರಿಗೆ ಗೊತ್ತು?

**ಕೂ:—** ಏನದ ಅವರ ಮನ್ಯಾಗ?

**ವಾ:—**ಹುಣ್ಣಿವಿ! ಹೋಳಿಗೀ ಮಾಡಿರಬೇಕು.

**ಕೂ:—** ಹಾಂಗಾರ ನಾ ಒಲ್ಲೆ ಹೋಗು.......

**ವಾ:—** ಇಲ್ಲೋ ಖೀರ ಮಾಡ್ಯಾರಂತ.......

**ಕೂ:—** ಹಾಂ ಹೋಗತೇನು ಬಿಡು. (ಸಂಪಡಿಸಿಕೊಂಡು ಚಿನ್ನನನ್ನು ಗುದ್ದಿ ಹೋಗುವನು. ಅವನು ಅಳುತ್ತ)

**ಚಿ:—** ಅವ್ವಾ ನೋಡು......

**ವಾ:—** ಏನ ಮಾಡಿದಾ ಬೋಳ್ಯಾ......

**ಚಿ:—** ಬಡದಾ......

**ವಾ:—** ಊಟಾ ಮಾಡಿ ಬರಲಿ. ನಾನೂ ಬಡಿತೇನು. ( ಎಂದು ಚಿನ್ನನನ್ನು ಕಂಕುಳಕ್ಕೆ ಏರಿಸಿಕೊಳ್ಳುವಳು. ) ಚಿನ್ನಾ... ನಿನಗ ಮಂತ್ರ ಬರತಾವೇನು ? ಅನ್ನು ನೋಡೂಣು.......

**ಚಿ:—** ( ಉಲ್ಲಾಸದಿಂದ ದನಿಯನ್ನು ಏರಿ ಇಳಿಸಿ ) ಅ......ಹ ......ಆ .....ರುದ್ರ......ಚಿ...... ಥೂ ......ಓ......ಪೇ......ನಾರಾಯಣಾ......

**ವಾ:—** (ಮುದ್ದುಕೊಟ್ಟು) ಎಲಾ ಲುಚ್ಚಾ, ಇಷ್ಟೆಲ್ಲ ಮಂತ್ರಾ ಎಲ್ಲಿ ಕಲಿತೋ...? (ಎದೆಗೆ ಗಟ್ಟಿಯಾಗಿ ಅಪ್ಪಿಕೊಳ್ಳುವಳು.)

**ಚಿ:—** (ಮೊದಲಿನಂತೆಯೇ ತನ್ನ ಮಂತ್ರ ಮತ್ತೆ ಮುಂದೆ ಸಾಗಿಸುವನು. ವಾಸಂತಿಯು ಮಗನಿಗೆ ಮುದ್ದು ಕೊಡುತ್ತೆ)

**ವಾ:—** ಸಾಕ ಬಿಡೋ ನಿನ್ನ ಮಂತ್ರ. (ಎನ್ನುತ್ತೆ ಹೋಗುವಳು.)

— ಪರದೆ.

